

# ಕರ್ನಾಟಕ ಸ್ಕೌಟ್ ಮತ್ತು ಗೈಡ್

ಮಾಸಿಕ ವಾರ್ತಾಪತ್ರಿಕೆ




# Karnataka Scout & Guide

*Monthly News Magazine*

Vol-14 June - 2016 Issue No. 06 ₹ 10/-



ಜೂನ್ 2016ರಂದು ಬೆಂಗಳೂರಿನ ಕಂಠೀರವ ಕ್ರೀಡಾಂಗಣದಲ್ಲಿ ಗಿದ ವಿಶ್ವ ಪರಿಸರ ದಿನಾಚರಣೆ ಅಂಗವಾಗಿ ಸನ್ಮಾನ್ಯ ಖ್ಯಮಂತ್ರಿಗಳಾದ ಶ್ರೀ ಸಿದ್ದರಾಮಯ್ಯನವರು ಸಸಿ ನೆಟ್ಟು ಯುತ್ತಿರುವುದು.



ಉಡುಪಿಯಲ್ಲಿ ಜರುಗಿದ ಸ್ಕೌಟರ್ಸ್-ಗೈಡರ್ಸ್ ಸಮಾವೇಶವನ್ನು ಪೇಜಾವರ ಮಠದ ಶ್ರೀಶ್ರೀಶ್ರೀ ವಿಶ್ವೇಶತೀರ್ಥ ಸ್ವಾಮಿಜಿ ಮತ್ತು ಶ್ರೀಶ್ರೀಶ್ರೀ ವಿಶ್ವಪ್ರಸನ್ನ ತೀರ್ಥಸ್ವಾಮಿಗಳು ಅವರು ಉದ್ಘಾಟಿಸಿದರು. ಶ್ರೀಮತಿ ಶಾಂತಿ ವಿ. ಆಚಾರ್ಯ, ರಾಜ್ಯ ಸಂಸ್ಥೆ ಉಪಾಧ್ಯಕ್ಷರು, ಶ್ರೀ ಎನ್. ಶ್ರೀನಿವಾಸನ್, ರಾಜ್ಯ ಸ್ಥಾನಿಕ ಆಯುಕ್ತರು, ಶ್ರೀ ಎಸ್ ಮಧುಕರ್, ಜಿಲ್ಲಾ ದೈಹಿಕ ಶಿಕ್ಷಣಾಧಿಕಾರಿಗಳು ಹಾಗೂ ಜಿಲ್ಲಾ ಪದಾಧಿಕಾರಿಗಳನ್ನು ಕಾಣಬಹುದು.




20 ಜೂನ್ 2016ರಂದು ಬೆಂಗಳೂರಿನ ಶಾಂತಿಗೃಹದಲ್ಲಿ ಜರುಗಿದ 2ನೇ ವಿಶ್ವಯೋಗ ದಿನಾಚರಣೆ ಕಾರ್ಯಕ್ರಮವನ್ನು ಶ್ರೀ ನಾಗಮೋಹನ್ ದಾಸ್, ಗೌರವಾನ್ವಿತ ನಿವೃತ್ತ ನ್ಯಾಯಾಧೀಶರು, ಕರ್ನಾಟಕ ಉಚ್ಚ ನ್ಯಾಯಾಲಯ ಅವರು ಉದ್ಘಾಟಿಸಿದರು. ಶ್ರೀ ಎನ್.ಎಸ್. ಮೇಘರಿಕ್, ಬೆಂಗಳೂರು ಮಹಾನಗರ ಪೊಲೀಸ್ ಆಯುಕ್ತರು, ಶ್ರೀ ಪಿ.ಜಿಆರ್. ಸಿಂಧ್ಯ, ಶ್ರೀ ಸಿ.ಎಸ್. ರೆಡ್ಡಿ ಹಾಗೂ ಇತರ ಪದಾಧಿಕಾರಿಗಳು ಚಿತ್ರದಲ್ಲಿದ್ದಾರೆ.



05 ಜೂನ್ 2016ರಂದು ಬೆಂಗಳೂರು ದಕ್ಷಿಣ ಜಿಲ್ಲಾ ಆಶ್ರಯದಲ್ಲಿ ಜರುಗಿದ ವಿಶ್ವ ಪರಿಸರ ದಿನಾಚರಣೆ ಸಂದರ್ಭದಲ್ಲಿ ಮಾನ್ಯ ಸಾರಿಗೆ ಸಚಿವರಾದ ಶ್ರೀ ರಾಮಲಿಂಗಾರೆಡ್ಡಿ ಅವರು ಮಾತನಾಡುತ್ತಿರುವುದು.



05 ಜೂನ್ 2016ರಂದು ಬೆಂಗಳೂರು ದಕ್ಷಿಣ ಜಿಲ್ಲಾ ಆಶ್ರಯದಲ್ಲಿ ಜರುಗಿದ ವಿಶ್ವ ಪರಿಸರ ದಿನಾಚರಣೆ ಸಂದರ್ಭದಲ್ಲಿ ಹಮ್ಮಿಕೊಂಡಿದ್ದ ಸೈಕಲ್ ಜಾಥದಲ್ಲಿ ಜಿಲ್ಲಾ ಪದಾಧಿಕಾರಿಗಳು ಹಾಗೂ ಸ್ಕೌಟ್ಸ್-ಗೈಡ್ಸ್‌ಗಳೊಂದಿಗೆ ರಾಜ್ಯ ಮುಖ್ಯ ಆಯುಕ್ತ ಶ್ರೀ ಪಿ.ಜಿ.ಆರ್. ಸಿಂಧ್ಯ ಅವರು ಪಾಲ್ಗೊಂಡಿರುವುದು.



15 ಜೂನ್ 2016 ರಂದು ಬಳ್ಳಾರಿ ಜಿಲ್ಲಾ ಸಂಸ್ಥೆ ಆಶ್ರಯದಲ್ಲಿ ಜರುಗಿದ ಸ್ಕೌಟರ್ಸ್-ಗೈಡರ್ಸ್ ಸಮಾವೇಶದ ಉದ್ಘಾಟನೆಯ ಸಮಾರಂಭದಲ್ಲಿ ಶ್ರೀ ವೀರಣ್ಣ ಎಸ್. ಜತ್ತಿ, ಉಪನಿರ್ದೇಶಕರು, ಸಾ.ಶಿ. ಇಲಾಖೆ, ಶ್ರೀ ಕೆ. ವೀರೇಶ್, ಜಿಲ್ಲಾ ಸ್ಕೌಟ್ ಆಯುಕ್ತ, ಶ್ರೀ ಎರ್ರಿಸ್ವಾಮಿ, ತಾಲೂಕು ದೈಹಿಕ ಶಿಕ್ಷಣ ಪರಿವೀಕ್ಷಕ, ಶ್ರೀ ವಿಜಯ ಸಿಂಹ, ಜಿಲ್ಲಾ ಕಾರ್ಯದರ್ಶಿ ಶ್ರೀಮತಿ ಉಷಾರಾಣಿ, ಗೈಡರ್ ಹಾಗೂ ಇತರರನ್ನು ಕಾಣಬಹುದು.



05 ಜೂನ್ 2016ರಂದು ದಾವಣಗೆರೆ ಜಿಲ್ಲಾ ಸಂಸ್ಥೆ ಆಶ್ರಯದಲ್ಲಿ ಜರುಗಿದ ಪದಕ ತರಬೇತಿ ಶಿಬಿರದಲ್ಲಿ ಜಿಲ್ಲಾ ಮುಖ್ಯ ಆಯುಕ್ತ ಶ್ರೀ ಮುರುಘರಾಜೇಂದ್ರ ಜೆ. ಚಿಗಟೇರಿ ಅವರು ಸೂರ್ಯ ಕಿರಣಗಳ ಮೂಲಕ ಸೌರ ಶಕ್ತಿಯ ಸಂಗ್ರಹಣೆ ಮತ್ತು ಶೇಖರಣೆ ಬಗ್ಗೆ ಸ್ಕೌಟ್ಸ್-ಗೈಡ್ಸ್‌ಗಳಿಗೆ ಮಾಹಿತಿ ನೀಡಿದರು.



21 ಜೂನ್ 2016ರಂದು ಹಾವೇರಿ ಜಿಲ್ಲಾ ಸಂಸ್ಥೆ ಹಾಗೂ ಸರ್ಕಾರಿ ಕನ್ನಡ ಪ್ರೌಢಶಾಲ. ಸ.ಮಾ.ಪ್ರಾ. ಶಾಲೆ ಹಾವೇರಿ ಇವರ ಸಂಯುಕ್ತಾಶ್ರಯದಲ್ಲಿ ಜರುಗಿದ ಯೋಗ ದಿನಾಚರಣೆಯಲ್ಲಿ ಭಾಗವಹಿಸಿದ ಸ್ಕೌಟ್ಸ್-ಗೈಡ್ಸ್‌ಗಳೊಂದಿಗೆ ತರಬೇತಿದಾರರಾದ ಶ್ರೀ ಸುಂದರ ಕುಲಕರ್ಣಿ ಅವರನ್ನು ಕಾಣಬಹುದು.



**Rover Scouts of HAL Rover Crew along with Senior officers of HAL Under took on "Swatch Bharat" on 1st May 2016 at HAL Officers Enclave.**

ಕರ್ನಾಟಕ ಸ್ಕೌಟ್ ಮತ್ತು ಗೈಡ್ ಮಾಸಿಕ ವಾರ್ತಾಪತ್ರಿಕೆ

# Karnataka Scout & Guide

*Monthly News Magazine*

Monthly Published by

**The Bharat Scouts & Guides, Karnataka**

State Headquarters, Shanthigruha
# 39, Palace Road, Bengaluru-560 001
Tel : 080-2226 0017, 2226 7470



## ಪರಿವಿಡಿ



**ಸಂಚಿಕೆಯ ವಾರ್ಷಿಕ ಚಂದಾ ರೂ. 100/-**

**ವಿದ್ಯಾಸಂಸ್ಥೆ ಹಾಗೂ ಸಂಘಸಂಸ್ಥೆಗಳಿಗೆ ವಾರ್ಷಿಕ ಚಂದಾ ರೂ. 100/- ಚಂದಾಹಣವನ್ನು ಸಂಪಾದಕರು, ಕರ್ನಾಟಕ ಸ್ಕೌಟ್ ಮತ್ತು ಗೈಡ್ ಮಾಸಪತ್ರಿಕೆ ರಾಜ್ಯ ಕೇಂದ್ರ ಕಛೇರಿ, ಶಾಂತಿಗೃಹ # 39, ಅರಮನೆ ರಸ್ತೆ, ಬೆಂಗಳೂರು-560 001 ದೂ: 080-2226 0017, 2226 7470 ಇಲ್ಲಿಗೆ ಕಳುಹಿಸಲು ಕೋರಿದೆ.**

ನಮ್ಮ ಸಂಸ್ಥೆಯ ವೆಬ್‌ಸೈಟ್ ಹಾಗು ಫೇಸ್‌ಬುಕ್ ಚಾಲನೆಯಲ್ಲಿದೆ : ಸಂಪರ್ಕಿಸಿ

**www.bsgkarnataka.org | www.kondajjibasappa.org | www.kondajjibasappa.com**

# ರಾಜ್ಯ ಮುಖ್ಯ ಆಯುಕ್ತರ ನುಡಿ



ಪ್ರಿಯ ಓದುಗ ಬಂಧುಗಳೇ
ಸಸ್ನೇಹ ನಮಸ್ಕಾರಗಳು

ಬೇಸಿಗೆಯ ರಜೆ ಮುಗಿದು ಶಾಲಾ-ಕಾಲೇಜುಗಳು ಪುನಾರಾರಂಭವಾಗಿದೆ. ವಿದ್ಯಾರ್ಥಿಗಳು ತಮ್ಮ ಮುಂದಿನ ಗುರಿಯತ್ತ ಮನಸ್ಸು ಮಾಡಬೇಕಾದ ಸಮಯವಿದು. ಹಲವರು ತಮ್ಮ ಬದುಕಿನ ಪ್ರಮುಖ ಹಂತವನ್ನು ತಲುಪಿದ್ದಾರೆ. ಮುಂದೇನು? ಎಂದು ತೀರ್ಮಾನಿಸಬೇಕಾದ ಸಂದರ್ಭವಿದು. ಪಾಲಕರಿಗೂ ಇದು ಸವಾಲಿನ ಸಮಯವೇ. ಮಕ್ಕಳು ಯಾವ ವಿಷಯವನ್ನು ಆರಿಸಿಕೊಳ್ಳಬೇಕು, ಯಾವ ಸಂಸ್ಥೆಯನ್ನು ಸೇರಬೇಕು, ಯಾವ-ಯಾವ ಸ್ಪರ್ಧಾತ್ಮಕ ಪರೀಕ್ಷೆಗಳನ್ನು ತೆಗೆದುಕೊಳ್ಳಬೇಕು ಎಂಬ ಪ್ರಶ್ನೆಗಳ ಜೊತೆಗೆ ಅವರಿಗೆ ಅಗತ್ಯವಾದ ಸಂಪನ್ಮೂಲಗಳನ್ನು ಹೊಂದಿಸುವುದು ಹೇಗೆ ಎಂಬುದು ಪಾಲಕರನ್ನು ಕಾಡುತ್ತಿದೆ.

ಹಲವಾರು ವರ್ಷಗಳ ಸಾಮಾಜಿಕ ಸ್ಪಂದನ -ಪ್ರತಿಸ್ಪಂದನದ ಅನುಭವದಿಂದ ಪಕ್ವವಾದ ಸ್ಕೌಟ್ಸ್ ಮತ್ತು ಗೈಡ್ಸ್ ಸಂಸ್ಥೆಯ ನಾಯಕರುಗಳು / ಹಿರಿಯ ಸದಸ್ಯರು ವಿದ್ಯಾರ್ಥಿಗಳಿಗೆ ಮತ್ತು ಪಾಲಕರಿಗೆ ಮಾರ್ಗದರ್ಶನ ನೀಡಬೇಕಾಗಿದೆ. ಮಕ್ಕಳ ಮುಂದಿನ ಭವಿಷ್ಯದ ಬಗ್ಗೆ, ಅವರ ಆಯ್ಕೆಗಳ ಬಗ್ಗೆ ಚರ್ಚಿಸಿ ದಾರಿ ತೋರಿಸಲು ತಜ್ಞರೊಡಗೂಡಿ ನಮ್ಮ ಸಂಸ್ಥೆಯಿಂದ ಮುಖಾ-ಮುಖಿ ಮಾತುಕತೆಗಳು ಮತ್ತು ಅಗತ್ಯ ಸಲಹೆ-ಸೂಚನೆಗಳು ದೊರೆಯುವಂತೆ ಸಮಾವೇಶಗಳನ್ನು ನಾವೀಗ ಏರ್ಪಡಿಸಬೇಕು. ಈ ದಿಶೆಯಲ್ಲಿ ನಾವು ಕ್ರಿಯಾಶೀಲರಾಗಿ ಕಾರ್ಯಪ್ರವರ್ತರಾಗೋಣ.

17ನೇಯ ರಾಷ್ಟ್ರೀಯ ಜಾಂಬೂರಿಯು ಸಮೀಪಿಸುತ್ತಿರುವಂತೆ ನಮ್ಮ ಜವಾಬ್ದಾರಿ ಹೆಚ್ಚುತ್ತಿದೆ. ಜಾಂಬೂರಿಯನ್ನು ಯಶಸ್ವಿಯಾಗಿ ನಿರ್ವಹಿಸಲು ನಾವೆಲ್ಲರೂ ಇನ್ನಷ್ಟು ತೀವ್ರವಾಗಿ ತೊಡಗಿಸಿಕೊಳ್ಳಬೇಕು. ಈಗಾಗಲೇ ಕರ್ನಾಟಕದ ಘನ ಸರ್ಕಾರವು ಜಾಂಬೂರಿಯನ್ನು ನಡೆಸಲು ಎಲ್ಲಾ ರೀತಿಯ ಸಹಕಾರವನ್ನು ನೀಡಲು ತೀರ್ಮಾನಿಸಿದೆ. ಸಾಕಷ್ಟು ಧನ ಸಹಾಯವನ್ನೂ ಒದಗಿಸಿದೆ. ಕರ್ನಾಟಕ ರಾಜ್ಯ ಮತ್ತು ಮೈಸೂರು ಜಿಲ್ಲಾ ಪದಾಧಿಕಾರಿಗಳ ಸಭೆಯು ಈಗಾಗಲೇ ನಡೆದಿದ್ದು, ಜಾಂಬೂರಿಯ ಪ್ರಥಮ ಸುದ್ದಿಪತ್ರವು ಬಿಡುಗಡೆಯಾಗಿದೆ. ದಿನಾಂಕ:13 ಜೂನ್ 2016ರಂದು ಬೆಂಗಳೂರಿನಲ್ಲಿ ನಡೆದ ರಾಜ್ಯ ಕಾರ್ಯಕಾರಿಣಿಯು ಇದಕ್ಕೆ ಪೂರಕವಾಗಿ ಠರಾವುಗಳನ್ನು ಅಂಗೀಕರಿಸಿ ಜಾಂಬೂರಿಯ ಪೂರ್ವಸಿದ್ಧತೆಯ ಬಗ್ಗೆ ವಿಸ್ತೃತವಾಗಿ ಚರ್ಚಿಸಿತು. ಈ ತಿಂಗಳ 8 ಮತ್ತು 9ನೇ ತಾರೀಖಿನಂದು ನಾನು ದೆಹಲಿಗೆ ಭೇಟಿಕೊಟ್ಟು ರಾಷ್ಟ್ರೀಯ ಕೇಂದ್ರ ಕಛೇರಿಯಲ್ಲಿ ಪದಾಧಿಕಾರಿಗಳೊಂದಿಗೆ ಜಾಂಬೂರಿಯ ಸಿದ್ಧತೆಯ ಬಗ್ಗೆ ವಿವರವಾಗಿ ಚರ್ಚಿಸಿದ್ದೇನೆ. ಜಾಂಬೂರಿಯ ಲಾಂಛನವನ್ನು ಸಿದ್ಧಪಡಿಸಿ ರಾಷ್ಟ್ರೀಯ ಕೇಂದ್ರ ಕಛೇರಿಗೆ ಕಳುಹಿಸಲಾಗಿದೆ. ಜಾಂಬೂರಿಯ ಜೊತೆಗೆ ಇನ್ನಿತರ ಹಲವಾರು ಕಾರ್ಯಕ್ರಮಗಳು, ಕಾರ್ಯಯೋಜನೆ ಮತ್ತು ಆಡಳಿತ ಸುಧಾರಣೆ, ಮುಂತಾದ ಹಲವಾರು ವಿಷಯಗಳ ಬಗ್ಗೆ ಕಾರ್ಯಕಾರಣಿಯು ಚರ್ಚಿಸಿದೆ.

ಈ ತಿಂಗಳಿನಲ್ಲಿ ರಾಷ್ಟ್ರದ ಮತ್ತು ಸಾರ್ವಜನಿಕರ ಗಮನವನ್ನು ಸೆಳೆದಿದ್ದು, ಎರೆಡು ಪ್ರಮುಖ ದಿನಾಚರಣೆಗಳು. ಒಂದು ಜೂನ್ 5 ರಂದು ನಡೆದ "ವಿಶ್ವ ಪರಿಸರ ದಿನ" ಮತ್ತೊಂದು ಜೂನ್ 21ರಂದು ನಡೆದ "ಅಂತರ ರಾಷ್ಟ್ರೀಯ ಯೋಗ" ದಿನಾಚರಣೆಗಳು. ಈ ಎರೆಡೂ ಕಾರ್ಯಕ್ರಮಗಳಲ್ಲಿ ಕರ್ನಾಟಕ ಸ್ಕೌಟ್ಸ್ ಮತ್ತು ಗೈಡ್ಸ್ ಅತ್ಯಂತ ಕ್ರಿಯಾಶೀಲವಾಗಿ ಭಾಗವಹಿಸಿ ವೈಶಿಷ್ಟ್ಯಪೂರ್ಣವಾಗಿ ಆಚರಿಸಿತು.

ನಮ್ಮ ಸಂಸ್ಥೆ ಮತ್ತು ಕರ್ನಾಟಕ ರಾಜ್ಯ ಮಾಲಿನ್ಯ ನಿಯಂತ್ರಣ ಮಂಡಳಿಯ ಸಂಯುಕ್ತ ಆಶ್ರಯದಲ್ಲಿ ಜೂನ್ 5 ಮತ್ತು 6ರಂದು **"ವನ್ಯ ಜೀವಿ ಸಂರಕ್ಷಣೆ ಎಡೆ ನಮ್ಮ ನಡೆ"** ಎಂಬ ವಿಶ್ವ ಸಂಸ್ಥೆಯ ಘೋಷಣೆಯೊಂದಿಗೆ ವಿಶ್ವಪರಿಸರ ದಿನವನ್ನು ಆಚರಿಸಲಾಯಿತು. ದಿನಾಂಕ 5 ರಂದು ಶಾಂತಿಗೃಹದಲ್ಲಿ ಸೇರಿದ್ದ ಸ್ಕೌಟ್ಸ್ ಮತ್ತು ಗೈಡ್ಸ್‌ಗಳನ್ನು ಉದ್ದೇಶಿಸಿ ಪರಿಸರ ಸಮತೋಲನ, ಪರಿಸರವನ್ನು ಕಾಪಾಡುವ ಅಗತ್ಯ ಮುಂತಾದ ವಿಷಯಗಳ ಬಗ್ಗೆ ನಾನು ಮಾತನಾಡಿದೆ. ನಂತರ ಮೆರವಣಿಗೆಯ ಮೂಲಕ ನಾವೆಲ್ಲರೂ ಕಂಠೀರವ ಕ್ರೀಡಾಂಗಣದಲ್ಲಿ ನಡೆದ ಬೃಹತ್ ಸಮಾವೇಶದಲ್ಲಿ ಭಾಗವಹಿಸಿದೆವು. ನಮ್ಮನ್ನು ಉದ್ದೇಶಿಸಿ ಕರ್ನಾಟಕ ರಾಜ್ಯದ ಸನ್ಮಾನ್ಯ ಮುಖ್ಯ ಮಂತ್ರಿಗಳಾದ ಶ್ರೀ ಸಿದ್ದರಾಮಯ್ಯನವರು ಮಾತನಾಡಿದರು. ಸ್ಕೌಟ್ಸ್ ಮತ್ತು ಗೈಡ್ಸ್‌ಗಳೊಂದಿಗೆ ಈ ಕಾರ್ಯಕ್ರಮದಲ್ಲಿ ಭಾಗವಹಿಸಿದ್ದು, ನನಗೆ ಹೆಮ್ಮೆ ಮತ್ತು ಚಿರಕಾಲ ನೆನಪಿನಲ್ಲಿ ಉಳಿಯುವಂತಹದ್ದಾಗಿದೆ.

ಪರಿಸರವನ್ನು ಕಾಪಾಡುವುದು ನಮ್ಮೆಲ್ಲರ ಆದ್ಯ ಕರ್ತವ್ಯವಾಗಿದೆ. ಸಾಮಾಜಿಕ, ವೈಜ್ಞಾನಿಕ ಮತ್ತು ಔದ್ಯೋಗಿಕ ಬೆಳವಣಿಗೆಗಳು ಪರಿಸರ ಸಂರಕ್ಷಣೆ ಮತ್ತು ಅಭಿವೃದ್ಧಿಗೆ ಪೂರಕವಾಗಿ ಇರಬೇಕು. ಶುದ್ಧ ನೀರು, ಶುದ್ಧ ಗಾಳಿ, ಸ್ವಚ್ಛ ವಾತಾವರಣ ಎಲ್ಲರ ಸಮಾನ ಹಕ್ಕು. ಈ ಬಗ್ಗೆ ಜನಜಾಗೃತಿ ಅಗತ್ಯ. ನಮ್ಮ ಸಂಸ್ಥೆಯ ವತಿಯಿಂದ ಸ್ಕೌಟ್ಸ್ ಮತ್ತು ಗೈಡ್ಸ್‌ಗಳಿಗೆ ನೀಡಿರುವ ತರಬೇತಿಯು ಅವರುಗಳನ್ನು ಉತ್ತಮ ನಾಗರೀಕರನ್ನಾಗಿ ರೂಪಿಸುವುದರಲ್ಲಿ ಮೌಲಿಕವಾದ ಕೊಡುಗೆಯನ್ನು ನೀಡಿದೆ ಎಂದು ನಾನು ಭಾವಿಸುತ್ತೇನೆ.

ಈ ತಿಂಗಳ 21ನೇ ತಾರೀಖು ಎರಡನೆಯ **"ಅಂತರರಾಷ್ಟ್ರೀಯ ವಿಶ್ವ ಯೋಗ ದಿನ"**. ಸಾಮಾಜಿಕ ಮತ್ತು ವೈಯಕ್ತಿಕ ಸ್ವಾಸ್ಥ್ಯಕ್ಕೆ ಶತಮಾನಗಳಿಂದ ಭಾರತೀಯ ಯೋಗಶಾಸ್ತ್ರವು ನೀಡಿರುವ ಕೊಡುಗೆಯನ್ನು ಗೌರವಿಸಿ ವಿಶ್ವಸಂಸ್ಥೆಯು 2015ರಲ್ಲಿ, ಪ್ರತಿವರ್ಷ ಜೂನ್ 21ರಂದು **"ವಿಶ್ವ ಯೋಗ ದಿನ"** ಎಂದು ಆಚರಿಸಲು ತೀರ್ಮಾನಿಸಿತು. ಈ ಮುನ್ನವೂ ಹಲವಾರು ವಿದೇಶಿ ಸರ್ಕಾರಗಳು, ವಿದೇಶಿ ಪ್ರಜೆಗಳು ಯೋಗದ ಲಾಭವನ್ನು ಪಡೆದಿದ್ದರು. ಭಾರತ ಸರ್ಕಾರ ಮತ್ತು ಎಲ್ಲಾ ರಾಜ್ಯ ಸರ್ಕಾರಗಳು ಯೋಗ ದಿನಾಚರಣೆಯಲ್ಲಿ ಕ್ರಿಯಾಶೀಲವಾಗಿ ಭಾಗವಹಿಸುತ್ತಿವೆ.

ಬೆಂಗಳೂರಿನಲ್ಲಿ ಜೂನ್ 20, 21 ಮತ್ತು 22ರಂದು ದಕ್ಷಿಣ ವಲಯದ ಕರ್ನಾಟಕ, ತಮಿಳುನಾಡು, ಕೇರಳ, ಪುದುಚೇರಿ, ತೆಲಂಗಾಣ, ಆಂಧ್ರ ಮತ್ತು ಗೋವಾ ರಾಜ್ಯಗಳಿಂದ ಸುಮಾರು 250ಕ್ಕೂ ಹೆಚ್ಚು ಸ್ಕೌಟ್ಸ್, ಗೈಡ್ಸ್, ರೋವರ್ಸ್ ಮತ್ತು ರೇಂಜರ್ಸ್‌ಗಳು ಈ ಕಾರ್ಯಕ್ರಮದಲ್ಲಿ ಭಾಗವಹಿಸಿದ್ದರು. ಋಷಿ ಸಂಸ್ಕೃತಿ ವಿದ್ಯಾಕೇಂದ್ರದ ಯೋಗ ಗುರುಗಳು, ಯೋಗದಲ್ಲಿ ಪರಿಣಿತಿಯನ್ನು ಪಡೆದ ತರಬೇತುದಾರರು ಮಕ್ಕಳಿಗೆ ಮಾರ್ಗದರ್ಶನ ನೀಡಿದರು. ದಿನಾಂಕ 20ರಂದು ಕರ್ನಾಟಕ ಉಚ್ಚನ್ಯಾಯಾಲಯದ ಗೌರವಾನ್ವಿತ ನಿವೃತ್ತ ನ್ಯಾಯಾಧೀಶರಾದ ಶ್ರೀ ನಾಗಮೋಹನ್ ದಾಸ್‌ರವರು ಕಾರ್ಯಕ್ರಮವನ್ನು ಉದ್ಘಾಟಿಸಿದರು. ಶ್ರೀ ಎಸ್.ಎನ್.ಮೇಘರಿಕ್, ಭಾ.ಪೊ.ಸೇ., ಬೆಂಗಳೂರು ಮಹಾನಗರ ಪೊಲೀಸ್ ಆಯುಕ್ತರು ಮುಖ್ಯ ಅತಿಥಿಗಳಾಗಿ ಭಾಗವಹಿಸಿದ್ದರು. 21ರಂದು ಶ್ರೀಮತಿ ಫಿಲೋಮಿನಾ ಲೋಬೋ, ನಿರ್ದೇಶಕರು (ಪ್ರೌಢ ಶಿಕ್ಷಣ), ಸಾರ್ವಜನಿಕ ಶಿಕ್ಷಣ ಇಲಾಖೆ, ಕರ್ನಾಟಕ ಸರ್ಕಾರ, ಇವರು ಸಮಾರೋಪ ಭಾಷಣವನ್ನು ಮಾಡಿದರು. ಶ್ರೀ ಕೆ.ಆನಂದ್, ನಿರ್ದೇಶಕರು (ಪ್ರಾಥಮಿಕ ಶಿಕ್ಷಣ), ಸಾರ್ವಜನಿಕ ಶಿಕ್ಷಣ ಇಲಾಖೆ, ಕರ್ನಾಟಕ ಸರ್ಕಾರ, ಇವರು ಮುಖ್ಯ ಅತಿಥಿಗಳಾಗಿ ಭಾಗವಹಿಸಿದ್ದರು. ನಾನು ಋಷಿ ಸಂಸ್ಕೃತಿ ವಿದ್ಯಾ ಕೇಂದ್ರದ ಪದಾಧಿಕಾರಿಗಳಿಗೆ ಮತ್ತು ಕಾರ್ಯಕ್ರಮವನ್ನು ಯಶಸ್ವಿಗೊಳಿಸಲು ಸಹಕಾರ ನೀಡಿದ ಪ್ರತಿಯೊಬ್ಬರನ್ನೂ ಹೃತ್ಪೂರ್ವಕವಾಗಿ ಅಭಿನಂದಿಸುತ್ತೇನೆ.

ದಿನಾಚರಣೆಗಳು ಕೇವಲ ಒಂದು ದಿನಕ್ಕೆ ಮುಗಿಯುವಂತಹವುದಲ್ಲ. ಅವು ನಮ್ಮಲ್ಲಿ ಜಾಗೃತಿಯನ್ನು ಉಂಟುಮಾಡಲು ನಡೆಸುವ ಕಾರ್ಯಕ್ರಮಗಳಾಗಿವೆ. ಆದರೆ ಈ ದಿನಾಚರಣೆಗಳ ಸ್ಫೂರ್ತಿಯನ್ನು ನಾವು ನಮ್ಮ ದೈನಂದಿನ ಚಟುವಟಿಕೆಗಳಲ್ಲಿ ಅನುಸರಿಸುವುದು ಬಹಳ ಮುಖ್ಯ. ನಮ್ಮ ಪರಿಸರವನ್ನು ಕಾಪಾಡಿಕೊಳ್ಳುವುದು ಎಷ್ಟು ಪ್ರಮುಖವೋ ಅದೇ ರೀತಿ ನಮ್ಮ ಮಾನಸಿಕ ಮತ್ತು ದೈಹಿಕ ಸ್ವಾಸ್ಥ್ಯವನ್ನು ಯೋಗದ ಮೂಲಕ ಕಾಪಾಡಿಕೊಂಡು ಅದರ ಸಂದೇಶವನ್ನು ಇತರರಿಗೆ ತಲುಪಿಸುವುದು ಮುಖ್ಯವಾಗಿದೆ. ಮುಂದಿನ ಜನಾಂಗಕ್ಕೆ ನಾವು ಕೊಡುವ ಕೊಡುಗೆಯಾಗಿದೆ.

ಈ ತಿಂಗಳ 2ನೇ ತಾರೀಖಿನಂದು ಚಿಕ್ಕಮಗಳೂರಿನಲ್ಲಿ ಸ್ಕೌಟ್ಸ್ ಮತ್ತು ಗೈಡ್ಸ್ ಸಂಸ್ಥೆಯ ಸ್ವಂತ ಕಟ್ಟಡದ ಉದ್ಘಾಟನೆ ಆಯಿತು. ಸ್ವಂತ ಕಟ್ಟಡದ ಮೂಲಕವಾಗಿ ನಮ್ಮ ಚಟುವಟಿಕೆಗಳು ಇನ್ನೂ ಹೆಚ್ಚಾಗುವುದರಲ್ಲಿ ಸಂಶಯವಿಲ್ಲ. ಚಿಕ್ಕಮಗಳೂರು

ಜಿಲ್ಲಾ ಸ್ಕೌಟ್ಸ್ ಮತ್ತು ಗೈಡ್ಸ್ ಸಂಸ್ಥೆಗೆ ನನ್ನ ಹಾರ್ದಿಕ ಅಭಿನಂದನೆಗಳು. ದಿನಾಂಕ 3ರಂದು ಹಾಸನ ಜಿಲ್ಲಾ ಪದಾಧಿಕಾರಿಗಳೊಂದಿಗೆ ಚಟುವಟಿಕೆಗಳ ಬಗ್ಗೆ ವಿಶ್ಲೇಷಣಾತ್ಮಕ ಸಭೆ ನಡೆಯಿತು. ಹಾಗೆಯೇ ದಿನಾಂಕ 6ರಂದು ಬೆಳಗಾವಿಯಲ್ಲಿ ಜಿಲ್ಲಾಧಿಕಾರಿಗಳ ಅಧ್ಯಕ್ಷತೆಯಲ್ಲಿ ಚಟುವಟಿಕೆಗಳ ಪರಿಶೀಲನಾ ಸಭೆ ನಡೆಯಿತು. ಜಿಲ್ಲಾ ಘಟಕಗಳಿಗೆ ನಾನು ಸತತವಾಗಿ ಭೇಟಿ ಕೊಡುತ್ತಿರುವುದರಿಂದ ಅಲ್ಲಿನ ಚಟುವಟಿಕೆಗಳ ಬಗ್ಗೆ ಸ್ಪಷ್ಟ ಚಿತ್ರಣ ನನಗೆ ಸಿಗುತ್ತಿದೆ. ಸ್ಕೌಟ್ಸ್ ಮತ್ತು ಗೈಡ್ಸ್‌ಗಳಲ್ಲಿ ಉತ್ಸಾಹ ತುಂಬಲು ನನ್ನ ಭೇಟಿ ಯಶಸ್ವಿಯಾಗುತ್ತಿದೆ ಎಂದು ನಾನು ಭಾವಿಸುತ್ತೇನೆ.

ಇತ್ತೀಚೆಗೆ ಕರ್ನಾಟಕ ಸರ್ಕಾರದ ಮಂತ್ರಿ ಮಂಡಳದ ಪುನಾರಚನೆಯಾಗಿದೆ. ಪ್ರಾಥಮಿಕ ಶಿಕ್ಷಣ ಸಚಿವರಾಗಿದ್ದ ಸನ್ಮಾನ್ಯ ಶ್ರೀ ಕಿಮ್ಮನೆ ರತ್ನಾಕರ್ ಅವರು ಕರ್ನಾಟಕದಲ್ಲಿ ಸ್ಕೌಟ್ಸ್ ಮತ್ತು ಗೈಡ್ಸ್ ಚಳವಳಿಯ ಮುನ್ನಡೆಗೆ ಗಣನೀಯವಾದ ಕೊಡುಗೆಯನ್ನು ನೀಡಿದ್ದಾರೆ. ನಮ್ಮ ಸಂಸ್ಥೆಯ ಪರವಾಗಿ ಅವರಿಗೆ ಹೃತ್ಪೂರ್ವಕ ಕೃತಜ್ಞತೆಯನ್ನು ಸಲ್ಲಿಸುತ್ತೇನೆ. ಅಂತೆಯೇ ಉನ್ನತ ಶಿಕ್ಷಣ ಸಚಿವರಾಗಿದ್ದ ಸನ್ಮಾನ್ಯ ಶ್ರೀ ಟಿ.ಬಿ.ಜಯಚಂದ್ರ ಅವರೂ ಕೂಡ ನಮ್ಮ ಚಟುವಟಿಕೆಗೆ ಪ್ರೋತ್ಸಾಹದಾಯಕರಾಗಿದ್ದರು. ಅವರ ಸಹಕಾರವನ್ನು ನಾವು ಯಾವಾಗಲೂ ನೆನಪಿಸಿಕೊಳ್ಳುತ್ತೇವೆ. ಸ್ಕೌಟ್ಸ್ ಮತ್ತು ಗೈಡ್ಸ್ ಚಳವಳಿಗೆ ಶ್ರೀ ಟಿ.ಬಿ.ಜಯಚಂದ್ರ ಅವರು ಸಲ್ಲಿಸಿದ ಸೇವೆಗಾಗಿ ನಾನು ಅವರಿಗೆ ಋಣಿ.

ಶ್ರೀ ಆರ್.ವಿ.ದೇಶಪಾಂಡೆ ಅವರು ಪ್ರವಾಸೋದ್ಯಮ ಸಚಿವರಾಗಿ ಸ್ಕೌಟ್ಸ್ ಚಳವಳಿಗೆ ಹೊಸ ಆಯಾಮವನ್ನೇ ನೀಡಿದರು. ಸುಮಾರು 5000 ಸ್ಕೌಟ್ಸ್ ಮತ್ತು ಗೈಡ್ಸ್‌ಗಳಿಗೆ ಕರ್ನಾಟಕ ದರ್ಶನದ ಅನುಕೂಲವನ್ನು ಒದಗಿಸಿಕೊಟ್ಟಿದ್ದಾರೆ. ಮುಂದಿನ ವರ್ಷಗಳಲ್ಲಿ ಈ ಯೋಜನೆಯಲ್ಲಿ ಇನ್ನೂ ಹೆಚ್ಚು ಸ್ಕೌಟ್ಸ್ ಮತ್ತು ಗೈಡ್ಸ್‌ಗಳನ್ನು ಸೇರಿಸುವ ಅಭಿಪ್ರಾಯ ನಮಗಿದೆ. ಶ್ರೀ ಆರ್.ವಿ.ದೇಶಪಾಂಡೆ ಅವರ ಬೆಂಬಲ ಮತ್ತು ಪ್ರೋತ್ಸಾಹ ಯಾವಾಗಲೂ ಸ್ಮರಣೀಯ. ಆರ್.ವಿ.ದೇಶಪಾಂಡೆ ಅವರಿಗೆ ಕರ್ನಾಟಕ ಸ್ಕೌಟ್ಸ್ ಮತ್ತು ಗೈಡ್ಸ್ ಪರವಾಗಿ ಹೃತ್ಪೂರ್ವಕ ನಮಸ್ಕಾರಗಳು.

ಶ್ರೀ ಬಸವರಾಜ ರಾಯರೆಡ್ಡಿ ಅವರು ಈಗ ಉನ್ನತ ಶಿಕ್ಷಣ ಸಚಿವರಾಗಿದ್ದಾರೆ. ಸ್ಕೌಟಿಂಗ್ ಚಳವಳಿಯನ್ನು ರೋವರ್/ರೇಂಜರ್ಸ್ ಮೂಲಕ ವಿಶ್ವವಿದ್ಯಾನಿಲಯಗಳಲ್ಲಿ ವಿಸ್ತರಿಸುವ ಆಲೋಚನೆಯನ್ನು ಹೊಂದಿದ್ದಾರೆ. ಅಂತೆಯೇ ಶ್ರೀ ತನ್ವೀರ್ ಸೇಠ್ ಅವರು ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಸಚಿವರಾಗಿದ್ದಾರೆ. ಅವರ ನಿರಂತರ ಒಳಗೊಳ್ಳುವಿಕೆ ಸ್ಕೌಟಿಂಗ್ ಬೆಳೆಯಲು ಮುಖ್ಯ ಕಾರಣವಾಗಿರುತ್ತದೆ. ಶ್ರೀ ಪ್ರಿಯಾಂಕ ಖರ್ಗೆ ಅವರು ನೂತನ ಪ್ರವಾಸೋದ್ಯಮ ಸಚಿವರಾಗಿದ್ದಾರೆ. ಶ್ರೀ ಆರ್.ವಿ.ದೇಶಪಾಂಡೆ ಅವರ ಕಾರ್ಯಕ್ರಮಗಳನ್ನು ಮುಂದುವರೆಸುವರೆಂಬ ಭರವಸೆ ನನಗಿದೆ. ಎಲ್ಲಾ ಹೊಸ ಸಚಿವರಿಗೆ ಅಭಿನಂದನೆಗಳು. ಅವರ ಎಲ್ಲಾ ಕಾರ್ಯಕ್ರಮಗಳಲ್ಲಿ ಯಶಸ್ಸು ಸಾಧಿಸಲಿ ಎಂದು ಹಾರೈಸುತ್ತೇನೆ.

ಕರ್ನಾಟಕ ಸರ್ಕಾರವು ಈ ಮಳೆಗಾಲದಲ್ಲಿ, ಅಂದರೆ ಜುಲೈ ತಿಂಗಳಲ್ಲಿ ಒಂದುವರೆ ಕೋಟಿ ಸಸಿಗಳನ್ನು ನೆಡುವ ಕಾರ್ಯಕ್ರಮವನ್ನು ಹೊಂದಿದೆ. ನಮ್ಮ ಸಂಸ್ಥೆಯ ಸದಸ್ಯರು "ಸಸಿ ನೆಡುವ ಮತ್ತು ರಕ್ಷಿಸುವ" ಕಾರ್ಯಕ್ರಮದಲ್ಲಿ ಆಸಕ್ತಿಯಿಂದ ಭಾಗವಹಿಸಬೇಕೆಂದು ಕೋರುತ್ತೇನೆ.

ಎಂದಿನಂತೆ ಕಬ್ಸ್/ ಬುಲ್‌ಬುಲ್ಸ್/ ಸ್ಕೌಟ್ಸ್ / ಗೈಡ್ಸ್ / ರೋವರ್ಸ್ ಮತ್ತು ರೇಂಜರ್ಸ್‌ಗಳ ತರಬೇತಿ ಕಾರ್ಯಕ್ರಮವು ನಿಗಧಿತ ವೇಳಾಪಟ್ಟಿಯಂತೆ ನಡೆಯುತ್ತಿದೆ. ಆದಷ್ಟು ಹೆಚ್ಚು ಕಾರ್ಯಕ್ರಮಗಳಲ್ಲಿ ಭಾಗವಹಿಸುವುದು ನನ್ನ ಆದ್ಯತೆಯಾಗಿದೆ. ಸ್ಕೌಟ್ ಚಳವಳಿಯ ಅತ್ಯುನ್ನತ ಧ್ಯೇಯ-ಧೋರಣೆಗಳು ಇಂದಿನ ವಿಷಮ ಪರಿಸ್ಥಿತಿಯನ್ನು ತಿಳಿಗೊಳಿಸಲು ತೀರಾ ಅವಶ್ಯಕವಾಗಿದೆ. ಇದನ್ನು ಮನಸ್ಸಿನಲ್ಲಿಟ್ಟುಕೊಂಡು ನಾವು ಸ್ಕೌಟ್ ಚಳವಳಿಯನ್ನು ಇನ್ನೂ ಎತ್ತರಕ್ಕೆ ಬೆಳಸಬೇಕಾದ ಅಗತ್ಯ ಎಂದಿಗಿಂತ ಇಂದು ತೀವ್ರವಾಗಿದೆ.

**ಸ್ಕೌಟ್ಸ್ ಮತ್ತು ಗೈಡ್ಸ್ ವಂದನೆಗಳೊಂದಿಗೆ**

ತಮ್ಮ ವಿಶ್ವಾಸಿ

**ಪಿ.ಜಿ.ಆರ್. ಸಿಂಧ್ಯ**

**ರಾಜ್ಯ ಮುಖ್ಯ ಆಯುಕ್ತರು**

# ರಾಜ್ಯ ಪುರಸ್ಕಾರ ಸ್ಕೌಟ್ಸ್ - ಗೈಡ್ಸ್ ಪರೀಕ್ಷಾ ಶಿಬಿರ

ದಿನಾಂಕ 24-05-2016 ರಿಂದ 28-05-2016 ರ ವರೆಗೆ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್, ಕರ್ನಾಟಕ ರಾಜ್ಯ ಮಟ್ಟದ ರಾಜ್ಯ ಪುರಸ್ಕಾರ ಪರೀಕ್ಷಾ ಶಿಬಿರ ಡಾ॥ ಅನಿಬೆಸೆಂಟ್ ಪಾರ್ಕ್, ರಾಜ್ಯ ಸ್ಕೌಟ್ಸ್-ಗೈಡ್ಸ್ ತರಬೇತಿ ಮತ್ತು ಶಿಬಿರ ಕೇಂದ್ರ, ದೊಡ್ಡಬಳ್ಳಾಪುರ, ಬೆಂಗಳೂರು ಇಲ್ಲಿ ಸಂಘಟಿಸಲಾಯಿತು. ಶಿಬಿರದ ಉದ್ಘಾಟನೆಯನ್ನು ಶ್ರೀ ಪಿ.ಜಿ.ಆರ್. ಸಿಂಧ್ಯ ರಾಜ್ಯ ಮುಖ್ಯ ಆಯುಕ್ತರು ನೆರವೇರಿಸಿದರು. ಸ್ಕೌಟ್ಸ್-ಗೈಡ್ಸ್‌ಗಳು ನಿಯಮದಂತೆ ನಡೆದು ಕೌಶಲ್ಯಗಳನ್ನು ಕಲಿತು ರಾಜ್ಯಪುರಸ್ಕಾರ ಸ್ಕೌಟ್‌ಗಳಾಗಬೇಕೆಂದು ಶುಭಾಶಯಗಳನ್ನು ತಿಳಿಸಿದರು. ರಾಜ್ಯದಲ್ಲಿ ಎಸ್‌ಎಸ್.ಎಲ್.ಸಿ. ಪರೀಕ್ಷೆಯಲ್ಲಿ 95% ಕ್ಕಿಂತ ಹೆಚ್ಚು ಅಂಕಗಳಿಸಿದ ಸ್ಕೌಟ್ಸ್-ಗೈಡ್ಸ್ ವಿದ್ಯಾರ್ಥಿಗಳನ್ನು ಗೌರವಿಸಲಾಗುವುದು ಎಂದು ತಿಳಿಸಿದರು.

ಶಿಬಿರಕ್ಕೆ ಶ್ರೀ ಪ್ರಹ್ಲಾದ್ ಗೌಡ, ಜಂಟಿ ನಿರ್ದೇಶಕರು (ಪ್ರೌಢಶಿಕ್ಷಣ) ರವರು ಭೇಟಿನೀಡಿ ಶಿಬಿರಾರ್ಥಿಗಳಿಗೆ ಶುಭಾಶಯಗಳನ್ನು ತಿಳಿಸಿದರು. ಶಿಬಿರದಲ್ಲಿ ಶ್ರೀ ಶರಾಫ್ ಮಾದಪ್ಪ ಎಲ್.ಟಿ.(ಸ್ಕೌ) ಸ್ಕೌಟ್ ವಿಭಾಗದ ನಾಯಕರಾಗಿ ಭಾಗವಹಿಸಿದ್ದರು. ಸಿಸ್ಟರ್ ಸಿಂಥಿಯಾ ಗೈಡ್ ವಿಭಾಗದ ನಾಯಕಿಯಾಗಿ ಕಾರ್ಯ ನಿರ್ವಹಿಸಿದರು. ಶ್ರೀ ಎಂ. ಪ್ರಭಾಕರ್ ಭಟ್, ರಾಜ್ಯ ಸಂಘಟನಾ ಆಯುಕ್ತರು (ಸ್ಕೌಟ್) ಮತ್ತು ಶ್ರೀಮತಿ ಮಂಜುಳ ರಾಜ್ಯ ಸಂಘಟನಾ ಅಯುಕ್ತರು (ಗೈಡ್) ಶಿಬಿರಗಳ ಸಂಯೋಜಕರಾಗಿ ಕಾರ್ಯ ನಿರ್ವಹಿಸಿದ್ದರು. ಶಿಬಿರದಲ್ಲಿ 304 ಸ್ಕೌಟ್ಸ್ 40 ಸ್ಕೌಟರ್‌ಗಳು ಭಾಗವಹಿಸಿದ್ದರು. ಗೈಡ್ ವಿಭಾಗದಿಂದ 336 ಗೈಡ್‌ಗಳು, 46 ಗೈಡ್ ಕ್ಯಾಪನ್‌ಗಳು ಭಾಗವಹಿಸಿದ್ದರು.

ಶ್ರೀ ಅನಲೇಂದ್ರ ಶರ್ಮ ಆರ್.ಓ.ಸಿ. (ಸ್ಕೌಟ್ಸ್) **"ಸರ್ಫ್ ಸ್ಮಾರ್ಟ್"** ಹಾಗೂ **"ಮೆಸೆಂಜರ್ ಆಫ್ ಪೀಸ್"** ಯೋಜನೆಗಳ ಬಗ್ಗೆ ಮಾಹಿತಿ ನೀಡಿದರು. ಶ್ರೀಮತಿ ಎಸ್.ಕೆ. ಪ್ರಭಾ ಎಲ್.ಟಿ.(ಗೈ) ರಾಜ್ಯ ಜಂಟಿ ಕಾರ್ಯದರ್ಶಿಯವರು **"ಫ್ರೀ ಬೀಯಿಂಗ್ ಮಿ"** ಪದಕದ ಬಗ್ಗೆ ಮಾಹಿತಿ ನೀಡಿದರು.

# State Level Testing Camp for Rajyapuraskar Award



State Level Testing Camp for Guides who are preparing for Rajyapuraskar award was held at State Training Center, Kondajji, Davanagere Dist. from 07-06-2016 to 11-06-2016 There were 457 Guides from 15 Districts of the State. Smt. B. Arunamala, ALT(G) was the Leader of the Camp. Smt.N.K. Chaya LT(G) and Headquarter Commissioner, Training was the Technical advisor. Smt. S.K. Prabha LT(G) and JSS (G) gave the information about the Proficiency Badge "Free Being Me"



The Guides were Tested in various subjects and skills as per APRO -PART-3. Smt. C. Manjula LT. (G) & SOC (G) Co-ordinated the Programme. Testing was also conducted for scouts. There were 373 Scouts from 7 Districts.

Sri Jimmi Sequira L.T.(S) was the Leader of the Camp. Sri D. Basavaraj L.T. (S) was the technical advisor. Smt. S.K. Prabha LT(G) and JSS(G) gave the information about Proficiency Badge "Free Being Me"

Scouts were Tested in Various Subjects and skills as per APRO Part - II. Sri M. Prabhakar Bhat, LT(S) & SOC(S) Co-ordinated the Programme. Sri P.G.R. Sindhia, State Chief Commissioner visited the Camp on 11-06-2016 and blessed the Scouts-Guides.

---

# ಅಭಿನಂದನೆಗಳು



ಚಿ॥ ನಾಗಾರ್ಜುನ ಬಿ.ಎಂ.
611 ಅಂಕಗಳು





ಕು॥ ಯಶ ಎಂ. ಭಟ್
614 ಅಂಕಗಳು

ಬೆಂಗಳೂರು ದಕ್ಷಿಣ ಜಿಲ್ಲೆ ಕಾರ್ಡಿಯಲ್ ಶಾಲೆಯ ಸ್ಕೌಟ್ ಚಿ॥ ನಾಗಾರ್ಜುನ ಬಿ.ಎಂ. ಹಾಗೂ ಗೈಡ್ ಕು॥ ಯಶ ಎಂ. ಭಟ್ ಇವರು 2015–16 ನೇ ಸಾಲಿನ ಎಸ್.ಎಸ್.ಎಲ್.ಸಿ. ಪರೀಕ್ಷೆಯಲ್ಲಿ ಕ್ರಮವಾಗಿ ಶೇಕಡ 97.76 ಹಾಗೂ ಶೇ 98.24 ಅಂಕಗಳನ್ನು ಗಳಿಸಿರುತ್ತಾರೆ ಭಾರತ್ ಸ್ಕೌಟ್ಸ್–ಗೈಡ್ಸ್ ಸಂಸ್ಥೆಯು ಇವರಿಗೆ ಶುಭಾಶಯಗಳನ್ನು ಕೋರುತ್ತದೆ.

ರಾಜ್ಯ ಕಾರ್ಯದರ್ಶಿ



**Better environment better tomorrow**

**Save The Planet**

# Regional Level Yoga Fest 




The Regional Level Yoga Fest, Southern Region was conducted at SHQ, Santhigruha BS&G, Karnataka with the help of BS&G, Karnataka State from 20.06.2016 to 22.06.2016 in which 74 (Seventy Four) participants from 07 (Seven) States of the Region participated. Mr. K. Sanmugam, SOC(S), BS&G, Puducherry State, Mr. C. Ravichandran,ALT (R), Sounthern Railway, Mr. P. Jaganathan, I/cSTC(S), SW Railway, Mr.L.T. Lokesh, STC(S),BSG, Karnataka State and Mr. Prabhakar Bhatt, SOC(S), Karnataka State and Ms. Revathi B, LT (B), Karnataka were on the Staff. Ms Veena , Meghana, Ravi and Santala from Siddha Samadhi Yoga Bangalore with blessing from Pujya Guruji Rishi Prabakarji helped us a lot providing the participants input session and practical demonstration of Yoga. Sri C.S. Reddy, State Secretary was present in all the activity.

Officially Sri H.N. Nagamohan Das, Retd. Judge of Karnataka High Court inaugurated on 20th June, 2016 in the presence of Mr. N. S. Megharikh, IPS, Commissioner of Police, Bangalore City and Mr P.G.R .Sindhiya, SCC BS&G, Karnataka State and other distinguished guests. An input session on Yoga was conducted by Guest experts of Yoga from Siddha Samadhi Yoga Bangalore. At 7:00 p.m. a DVD of Yoga "Jeevan Ki Sampurnata" received from Govt. of India, Ministry of Ayush was shown to the participants.

The 2nd day was started with practical demonstration of Yoga led by Guest experts of Yoga from Siddha Samadhi Yoga Bangalore. At 10:30 a.m. A Human Chain was arranged on Palace Road taking various Placards in different languages to create awareness in the people about Yoga. One more input session on Yoga and Personality Development was conducted at 11:30hrs. Input sessions on WOSM Peace initiative MOP was also conducted.

Valedictory function was held on 21.06.2016 at 4.30 P.M. Mrs. Philomena Lobo, DPI (SEC) Department of Public Instruction, delivered thevalidictory address. Sri K. Anand, DPI (Pry) Department of Public Instruction was the Chief Guest. Sri. P.G.R. Sindhia, State Chief Commissioner, Bharat Scouts and Guides presided over the function.

All Faith Prayer was held on 22.06.2016 led by by Guest experts of Yoga from Siddha Samadhi Yoga Bangalore One input session on Isha Yoga was also conducted.

# ರಾಜ್ಯ ಮಟ್ಟದ ವಯಸ್ಕ ನಾಯಕರ ತರಬೇತಿ ಶಿಬಿರಗಳು

ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಕರ್ನಾಟಕ ರಾಜ್ಯ ಸಂಸ್ಥೆಯ ವತಿಯಿಂದ ರಾಜ್ಯ ಮಟ್ಟದ ಈ ಕೆಳಕಂಡ ಶಿಬಿರಗಳನ್ನು ವಯಸ್ಕ ನಾಯಕರಿಗಾಗಿ ಕೊಂಡಜ್ಜಿ ಬಸಪ್ಪ ಸ್ಕೌಟ್ಸ್ & ಗೈಡ್ಸ್ ರಾಜ್ಯ ತರಬೇತಿ ಮತ್ತು ಶಿಬಿರ ಕೇಂದ್ರ, ಕೊಂಡಜ್ಜಿ, ಹರಿಹರ ತಾಲ್ಲೂಕು, ದಾವಣಗೆರೆ ಜಿಲ್ಲೆ, ಇಲ್ಲಿ ದಿನಾಂಕ : 14 ರಿಂದ 20 ಜೂನ್ 2016 ರವರೆಗೆ ಏರ್ಪಡಿಸಲಾಗಿತ್ತು. ವಿವರಗಳು ಕೆಳಕಂಡಂತಿವೆ.

| ಕ್ರ. ಸ. | ತರಬೇತಿಗಳು | ಭಾಗವಹಿಸಿದವರ ಸಂಖ್ಯೆ | ನಾಯಕರುಗಳು | ಸಿಬ್ಬಂದಿ ವರ್ಗ |
|---|---|---|---|---|
| 1. | ರಾಜ್ಯ ಮಟ್ಟದ ಮುಂದುವರೆದ ಸ್ಕೌಟ್ ಮಾಸ್ಟರ್‌ಗಳ ತರಬೇತಿ ಶಿಬಿರ (ಶಿಬಿರ –1 ) | 28 | ಶ್ರೀ ಡಿ. ಬಸವರಾಜು, ಎಲ್‌ಟಿ(ಎಸ್) | ಶ್ರೀ ಸಾಹೇಬಗೌಡ ರಾಮಗೌಡ ಪಾಟೀಲ್, ಎಎಲ್‌ಟಿ(ಎಸ್)<br>ಶ್ರೀ ಯರ್ರಣ್ಣ, ಎಎಲ್‌ಟಿ(ಎಸ್) |
| 2. | ರಾಜ್ಯ ಮಟ್ಟದ ಮುಂದುವರೆದ ಸ್ಕೌಟ್ ಮಾಸ್ಟರ್‌ಗಳ ತರಬೇತಿ ಶಿಬಿರ (ಶಿಬಿರ –2) | 25 | ಶ್ರೀ ಎಂ.ಆರ್.ಪಾಟೀಲ್, ಎಲ್‌ಟಿ(ಎಸ್) | ಶ್ರೀ ಶರೀಫ್ ಹತ್ತಿಮತ್ತೂರ್<br>ಶ್ರೀಕರಿಸಿದ್ದಪ್ಪ |
| 3. | ರಾಜ್ಯ ಮಟ್ಟದ ಮುಂದುವರೆದ ಕಬ್‌ಮಾಸ್ಟರ್‌ಗಳ ತರಬೇತಿ ಶಿಬಿರ | 10 | ಶ್ರೀಮತಿ ಸಿ. ಸಂಧ್ಯರಾಣಿ, ಎಲ್‌ಟಿ(ಸಿ)<br>ಶ್ರೀ ಪ್ರವೀಣ್. ಪಿ | ಸಿಸ್ಟರ್ ಜೂಲಿಯಾನ ಲರ್ಸಾಡೋ, ಎಲ್‌ಟಿ(ಸಿ) |
| 4 | ರಾಜ್ಯ ಮಟ್ಟದ ರೋವರ್ ಸ್ಕೌಟ್ ಲೀಡರ್‌ಗಳ ಮೂಲ ತರಬೇತಿ ಶಿಬಿರ | 25 | ಶ್ರೀ ಎ.ಎಂ.ಶಂಕರ್, ಎಲ್‌ಟಿ (ಆರ್) | ಶ್ರೀ ಎನ್.ಅಶೋಕ್‌ಕುಮಾರ್, ಹೆಚ್‌ಡಬ್ಲ್ಯೂಬಿ(ಆರ್)<br>ಶ್ರೀ ಡಿ.ಬಾಲಕೃಷ್ಣ, ಹೆಚ್‌ಡಬ್ಲ್ಯೂಬಿ(ಎಸ್)<br>ಶ್ರೀ ಡ್ಯಾನಿಯಲ್ ಸುಕುಮಾರ್‌ದಾಸ್<br>ಶ್ರೀ ಎಸ್.ಹೆಚ್.ಮಲ್ಲಾಪುರ ಹೆಚ್‌ಡಬ್ಲ್ಯೂಬಿ(ಆರ್) |
| 5. | ರಾಜ್ಯ ಮಟ್ಟದ ಮುರಾರ್ಜಿ ದೇಸಾಯಿ/ ಕಿತ್ತೂರು ರಾಣಿ ಚೆನ್ನಮ್ಮ ವಸತಿ ಶಾಲೆಗಳ ಶಿಕ್ಷಕರಿಗೆ ಪ್ರಾಥಮಿಕ ಸ್ಕೌಟ್ ಮಾಸ್ಟರ್‌ಗಳ ತರಬೇತಿ ಶಿಬಿರ | 21 | ಶ್ರೀ ಪಿ.ಮಂಜುನಾಥಪ್ಪ, ಎಎಲ್‌ಟಿ(ಎಸ್) | ಶ್ರೀ ಜೆ.ಎಸ್.ವಿಜಯ್, ಎಎಲ್‌ಟಿ (ಎಸ್)<br>ಶ್ರೀ ನಿಕಿತ್.ಸಿ. |
| 6. | ರಾಜ್ಯ ಮಟ್ಟದ ಮುರಾರ್ಜಿ ದೇಸಾಯಿ/ ಕಿತ್ತೂರು ರಾಣಿ ಚೆನ್ನಮ್ಮ ವಸತಿ ಶಾಲೆಗಳ ಶಿಕ್ಷಕರಿಗೆ ಗೈಡ್ ಕ್ಯಾಪ್ಟನ್‌ಗಳ ತರಬೇತಿ ಶಿಬಿರ | 21 | ಶ್ರೀಮತಿ ಅರುಣಮಾಲಾ, ಜಿ.ಬಿ ಎಎಲ್‌ಟಿ(ಗೈಡ್) | ಶ್ರೀಮತಿ ಮಧು ಶ್ರೀ.ಪಿ.ಹೆಚ್ ಹೆಚ್‌ಡಬ್ಲ್ಯೂಬಿ(ಜಿ)<br>ಆಶಾ ಹೆಚ್.ಜಿ. ಹೆಚ್‌ಡಬ್ಲ್ಯೂಬಿ(ಜಿ) |

ಶ್ರೀ ಎಲ್.ಟಿ.ಲೋಕೇಶ್, ರಾಜ್ಯ ತರಬೇತಿ ಆಯುಕ್ತರು (ಸ್ಕೌಟ್ಸ್) ಮತ್ತು ಶ್ರೀಮತಿ ಕೆ.ವಿ.ಶ್ಯಾಮಲ, ರಾಜ್ಯ ತರಬೇತಿ ಆಯುಕ್ತರು (ಗೈಡ್ಸ್) ಇವರ ಮಾರ್ಗದರ್ಶನದಲ್ಲಿ ತರಬೇತಿ ಶಿಬಿರಗಳು ಜರುಗಿದವು. ದಿನಾಂಕ: 17 ಜೂನ್ 2016 ರಂದು ಶಿಬಿರಾರ್ಥಿಗಳಿಗೆ ಹೊರಸಂಚಾರ ಕಾರ್ಯಕ್ರಮವನ್ನು ಏರ್ಪಡಿಸಲಾಗಿತ್ತು.

ದಿನಾಂಕ : 20 ಜೂನ್ 2016 ರಂದು ಬೆಳಗ್ಗೆ ರಾಷ್ಟ್ರೀಯ ಯೋಗ ದಿನಾಚರಣೆ ಅಂಗವಾಗಿ ಏರ್ಪಡಿಸಿದ್ದ ಕಾರ್ಯಕ್ರಮಕ್ಕೆ ಶ್ರೀ ಕರಿಬಸಪ್ಪ, ಶಿರಡಿ ಸಾಯಿಬಾಬಾ ಯೋಗಕೇಂದ್ರದ ಮುಖ್ಯಸ್ಥರು, ದಾವಣಗೆರೆ, ಆಗಮಿಸಿ, ಶಿಬಿರಾರ್ಥಿಗಳಿಗೆ ಯೋಗಭ್ಯಾಸ ಮಾಡಿಸಿ ಯೋಗದ ಮಹತ್ವವನ್ನು ತಿಳಿಸಿದರು ಮತ್ತು ಡಾ॥ಶಶಿಧರ್, ರಾಜ್ಯ ಕಾರ್ಯಕಾರಿ ಸಮಿತಿ ಸದಸ್ಯರು ಈ ಸಂದರ್ಭದಲ್ಲಿ ಹಾಜರಿದ್ದು, ಶಿಬಿರಾರ್ಥಿಗಳಿಗೆ ಯೋಗ ದಿನಾಚರಣೆಯ ಶುಭಾಶಯ ಕೋರಿದರು. ನಂತರ ಸರ್ವಧರ್ಮ ಸಮನ್ವಯ ಪ್ರಾರ್ಥನೆಯನ್ನು ಏರ್ಪಡಿಸಲಾಗಿತ್ತು.

## THE BHARAT SCOUTS AND GUIDES, KARNATAKA

## State Level Meetings and Sub-Committee Meetings Scheduled are as Follows

| S.No | Name of the Committee & Sub-Committee Meetings | Date Fixed | Time |
|---|---|---|---|
| 1 | State Council Meeting at Mysuru | 25.09.2016 | - |
| 2 | State Executive Committee at Mysuru | 07.08.2016 | - |
| 3 | State Finance Committee Meeting at SHQ | 30.07.2016 | - |
| 4 | Kondajji Basappa Scouts and Guides State Training and Camping Centre Development Sub-Committee Meeting at Kondajji | 16.07.2016 | 12.00 Noon |
| 5 | Shanthigruha Camp Development Sub-Committee Meeting at Bengaluru | 11.07.2016 | 12.00 Noon |
| 6 | Equipment Sub-Committee Meeting at Bengaluru | 11.07.2016 | 03.00 P.M. |
| 7 | Dr. Annie Besant Scout and Guide Camp Development Sub-Committee Meeting at Doddaballapura | 12.07.2016 | 12.00 Noon |
| 8 | Publication and Publicity Sub-Committee at Bengaluru | 13.07.2016 | 12.00 Noon |
| 9 | Karnataka State Bharat Scouts and Guides Trust at B'luru | 13.07.2016 | 02.00 P.M. |
| 10 | State Youth Committee Meeting at Bengaluru | 13.07.2016 | 03.00 P.M. |
| 11 | Screening Sub-Committee Meeting at Bengaluru | 14.07.2016 | 12.00 Noon |
| 12 | ASOC/DOC/DO's Meeting at Doddaballapura | 1-2/07/2016 | 10.00 A.M. |
| 13 | Review Meeting of PWD Dept. officers – SHQ, Bengaluru | 28.06.2016 | 12.00 Noon |
| 14 | Review Meeting of KRIDL officers - SHQ ,Bengaluru | 28.06.2016 | 02.00 P.M. |
| 15 | Review of SHQ Building, Fort - - SHQ, Bengaluru | 28.06.2016 | 03.00 P.M. |
| 16 | State Planning Committee Meeting – SHQ, Bengaluru | 09.11.2016 | 11.00 A.M. |
| 17 | Commissioners & Secretaries Meet- SHQ, Bengaluru | 10.11.2016 | 11.00 A.M. |
| 18 | 17th National Jamboree Meeting | 08.07.2016 | 05.00 P.M |
| 19 | Kondajji Basappa Birth Centenary Celebration –Valedictory Function | As per C.M.'s Date | |

**- STATE SECRETARY**

# ವಿಶ್ವ ಪರಿಸರ ದಿನಾಚರಣೆ




ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಕರ್ನಾಟಕ ರಾಜ್ಯ ಸಂಸ್ಥೆ ಮತ್ತು ರಾಜ್ಯ ಮಾಲಿನ್ಯ ನಯಂತ್ರಣ ಮಂಡಳಿಯ ಸಂಯುಕ್ತಾಶ್ರಯದಲ್ಲಿ ದಿ 05.06.2016 ಮತ್ತು 06.06.2016 ರಂದು **"ವನ್ಯ ಜೀವಿ ಸಂರಕ್ಷಣೆ ಎಡೆ ನಮ್ಮ ನಡೆ"** ಎಂಬ ವಿಶ್ವಸಂಸ್ಥೆಯ 2016 ರ ಘೋಷಣೆಯೊಡನೆ 2500 ಸ್ಕೌಟ್ಸ್ ಮತ್ತು ಗೈಡ್ಸ್‌ಗಳು ಕಂಠೀರವ ಸ್ಟೇಡಿಯಂನಲ್ಲಿ ಕರ್ನಾಟಕ ಸರ್ಕಾರ ಏರ್ಪಡಿಸಿದ ಕಾರ್ಯಕ್ರಮದಲ್ಲಿ ಭಾಗವಹಿಸಿದ್ದರು.

ಶ್ರೀ ಸಿದ್ದರಾಮಯ್ಯ ಮಾನ್ಯ ಮುಖ್ಯ ಮಂತ್ರಿಗಳು ಕಾರ್ಯಕ್ರಮದ ಉದ್ಘಾಟನೆಯನ್ನು ನೆರವೇರಿಸಿ, ಸ್ಕೌಟ್ಸ್ ಮತ್ತು ಗೈಡ್ಸ್‌ಗಳಿಗೆ ಶುಭವನ್ನು ಕೋರಿದರು. ಇದಕ್ಕೆ ಮುನ್ನ ಶಾಂತಿಗೃಹ ಆವರಣದಲ್ಲಿ ಸ್ಕೌಟ್ಸ್ ಮತ್ತು ಗೈಡ್ಸ್‌ಗಳಿಗೆ ಪರಿಸರ ದಿನಾಚರಣೆ ಪ್ರಯುಕ್ತ ಚಿತ್ರಕಲಾ ಸ್ಪರ್ಧೆಯನ್ನು ಏರ್ಪಡಿಸಲಾಗಿತ್ತು. ಭಾಗವಹಿಸಿದ ಸ್ಕೌಟ್ಸ್ ಮತ್ತು ಗೈಡ್ಸ್ ವಿಶ್ವ ಪರಿಸರ ದಿನಾಚರಣೆಯನ್ನು ಕುರಿತಾಗಿ ಮಾತನಾಡಿದರು ಮತ್ತು ಪರಿಸರವನ್ನು ಸಂರಕ್ಷಣೆಯ ಜವಾಬ್ದಾರಿಯ ಬಗ್ಗೆ ಪ್ರತಿಜ್ಞೆಯನ್ನು ಸ್ವೀಕರಿಸಿದರು.

ಮಾನ್ಯ ಪಿ.ಜಿ.ಆರ್. ಸಿಂಧ್ಯ ರಾಜ್ಯ ಮುಖ್ಯ ಆಯುಕ್ತರು ಮಾತನಾಡಿ ಶುಭಹಾರೈಸಿ ದಿನಾಚರಣೆಯ ಮಹತ್ವವನ್ನು ತಿಳಿಸಿದರು. ರಾಜ್ಯ ಮಾಲಿನ್ಯ ನಿಯಂತ್ರಣ ಮಂಡಳಿ ಏರ್ಪಡಿಸಿದ್ದ ಪರಿಸರದ ಕುರಿತಾದ ವಿವಿಧ ಉಪಯುಕ್ತ ಪ್ರದರ್ಶನ ಮಳಿಗೆಗಳಲ್ಲಿ ಸ್ಕೌಟ್ಸ್ ಮತ್ತು ಗೈಡ್ಸ್ ಗಳು ಪ್ರಾತ್ಯಕ್ಷಿಕತೆಯನ್ನು ಪ್ರದರ್ಶಿಸಿದರು.

ಬೆಂಗಳೂರು ದಕ್ಷಿಣ ಜಿಲ್ಲಾ ಸಂಸ್ಥೆ ವತಿಯಿಂದ ನಡೆದ ಸೈಕಲ್ ಜಾಥಾದಲ್ಲಿ ಸುಮಾರು 300 ಸ್ಕೌಟ್ಸ್-ಗೈಡ್ಸ್‌ಗಳು ಭಾಗವಹಿಸಿದ್ದರು. ಶ್ರೀ ಮೋಹನ್ ಕೊಂಡಜ್ಜಿ ಕೇಂದ್ರ ಕಛೇರಿ ಆಯುಕ್ತರು ಕಾರ್ಯಕ್ರಮಕ್ಕೆ ಮಾರ್ಗದರ್ಶನ ಮತ್ತು ಸಹಕಾರವನ್ನು ನೀಡಿದರು. ರಾಜ್ಯ ಆಯಕ್ತರು (ಸ್ಕೌ-ಗೈ), ರಾಜ್ಯ ಕಾರ್ಯದರ್ಶಿ, ಜಂಟಿ ಕಾರ್ಯದರ್ಶಿ(ಗೈ) ರಾಜ್ಯ ಸಂಸ್ಥೆ, ಜಿಲ್ಲಾ ಸಂಸ್ಥೆ ಪದಾಧಿಕಾರಿಗಳು ಭಾಗವಹಿಸಿದ್ದರು.

# ರಾಜ್ಯಮಟ್ಟದ ಗೈಡ್ ಕ್ಯಾಪ್ಟನ್ ಫ್ಲಾಕ್ ಲಿಡರ್ಸ್ ತರಬೇತಿ ಶಿಬಿರ

ದಿನಾಂಕ 22-06-2016 ರಿಂದ 28-06-2016 ರ ವರೆಗೆ ರಾಜ್ಯ ತರಬೇತಿ ಮತ್ತು ಶಿಬಿರ ಕೇಂದ್ರ ಕೊಂಡಜ್ಜಿ, ಹರಿಹರ ತಾಲ್ಲೂಕು. ದಾವಣಗೆರೆ ಜಿಲ್ಲೆಯಲ್ಲಿ ರಾಜ್ಯ ಮಟ್ಟದ ಶಿಬಿರಗಳು ನಡೆದವು.

1) ರಾಜ್ಯಮಟ್ಟದ ಮುಂದುವರೆದ ಗೈಡ್ ಕ್ಯಾಪ್ಟನ್ ತರಬೇತಿ ಶಿಬಿರ ಭಾಗವಹಿಸಿದವರ ಸಂಖ್ಯೆ 48. ಶಿಬಿರದ ನಾಯಕಿ ಶ್ರೀಮತಿ ಅಜೀಜಾ ಸುಲ್ತಾನ್, ಎಲ್.ಟಿ.(ಗೈ) ಸಹಾಯಕರು. ಶ್ರೀಮತಿ ವಜ್ರಗಂಗಮ್ಮ ಪ್ರೀ-ಎ.ಎಲ್.ಟಿ.(ಗೈ) ಶ್ರೀಮತಿ ಲಲಿತಾ ಬಿರದಾರ್, ಹೆಚ್.ಡಬ್ಲ್ಯೂ.ಬಿ. (ಗೈ), ಶ್ರೀಮತಿ ಕಲ್ಲಮ್ಮ, ಹೆಚ್.ಡಬ್ಲ್ಯೂ.ಬಿ. (ಗೈ) ಶ್ರೀಮತಿ ಕಾತ್ಯಾಯಿನಿ.

2) ಮುಂದುವರೆದ ಫ್ಲಾಕ್ ಲಿಡರ್ ತರಬೇತಿ ಶಿಬಿರ ಭಾಗವಹಿಸಿದ ಸಂಖ್ಯೆ 17, ನಾಯಕಿ ಶ್ರೀಮತಿ ವಿಮಲಾಬಾಯಿ ಎ.ಎಲ್.ಟಿ.(ಬಿ), ಶ್ರೀಮತಿ ನಾಗರತ್ನಮ್ಮ ಎ.ಎಲ್.ಟಿ.(ಬಿ), ಶ್ರೀಮತಿ ವಸಂತ ಅಡ್ವಾನ್ಸ್ (ಬಿ), ಶ್ರೀಮತಿ ಬುಲ್‌ಕಿಶ್ ಅಡ್ವಾನ್ಸ್(ಬಿ). ಶ್ರೀಮತಿ ಶಾಮಲ ಕೆ.ವಿ. ರಾಜ್ಯ ತರಬೇತಿ ಆಯುಕ್ತರು(ಗೈ)ರವರು ಮಾರ್ಗದರ್ಶನ ನೀಡಿದರು.

## ದಿನಾಂಕ: 13 ಜೂನ್ 2016 ರಂದು
## ರಾಜ್ಯ ಕೇಂದ್ರ ಕಛೇರಿಯಲ್ಲಿ ನಡೆದ
## ರಾಜ್ಯ ಕಾರ್ಯಕಾರಿ ಸಮಿತಿ ಸಭೆಯಲ್ಲಿ
## ಕಳಕಂಡ ಮಹನೀಯರಿಗೆ ಶ್ರದ್ಧಾಂಜಲಿ ಅರ್ಪಿಸಲಾಯಿತು

1. ಶ್ರೀ ಹೆಚ್.ಜಿ. ಗೋವಿಂದೆಗೌಡ, ಮಾಜಿ ಶಿಕ್ಷಣ ಸಚಿವರು, ಕರ್ನಾಟಕ ಸರ್ಕಾರ ಮತ್ತು ಮಾಜಿ ಉಪಾಧ್ಯಕ್ಷರು, ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್, ಕರ್ನಾಟಕ
2. ಪದ್ಮಶ್ರೀ ಪುರಸ್ಕೃತ ಕನ್ನಡದ ಹಿರಿಯ ಸಾಹಿತಿ, ಕರ್ನಾಟಕ ರತ್ನ, ನಾಡೋಜ, ಡಾ. ದೇ. ಜವರೇಗೌಡರು
3. ಶ್ರೀಮತಿ ಓಕ್ಟೇವಿಯ ಆಲ್ಬುಕರ್ಕ್, ಮಾಜಿ ರಾಜ್ಯ ಆಯುಕ್ತರು (ಗೈಡ್ಸ್), ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್, ಕರ್ನಾಟಕ.
4. ಶ್ರೀ ಹೆಚ್.ಎಸ್. ರೇಣುಕಾಪ್ರಸಾದ್, ಆಜೀವ ಸದಸ್ಯರು, ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಕರ್ನಾಟಕ ಬೆಂಗಳೂರು.
5 ಶ್ರೀ ಜಿ.ಸಿ. ದೇವರಾಜ್, ಎಲ್.ಟಿ.(ಸ್ಕೌಟ್ಸ್) ಕಾರವಾರ
6. ಶ್ರೀ ಶ್ರೀಕಂಠಮೂರ್ತಿ, ಎ.ಎಲ್.ಟಿ ಮತ್ತು ಜಿಲ್ಲಾ ಕಾರ್ಯದರ್ಶಿ, ಬೆಂಗಳೂರು ಗ್ರಾಮಾಂತರ ಜಿಲ್ಲೆ.
7. ಶ್ರೀ ರಾಮ ಎನ್. ಪಟಗಾರ, ಜಿಲ್ಲಾ ಸಂಘಟನಾ ಆಯುಕ್ತರು, ಶಿರಸಿ
8. ರಾಷ್ಟ್ರಯೋಧ ಲ್ಯಾನ್ಸ್ ನಾಯಕ ಶ್ರೀ ಹನುಮಂತಪ್ಪ ಕೊಪ್ಪದ.
9. ಶ್ರೀ ಸ.ವೆಂ. ರಘೋತ್ತಮರಾವ್, ಹಿರಿಯ ಸ್ಕೌಟರ್, ಮೈಸೂರು
10. ಶ್ರೀ ಬಿ. ಈಶ್ವರಪ್ಪ, ಸಹಾಯಕ ರಾಜ್ಯ ಸಂಘಟನಾ ಆಯುಕ್ತರು (ನಿವೃತ್ತ) ಕೊಂಡಜ್ಜಿ
11. ಶ್ರೀಮತಿ ನಾರಾಯಣಮ್ಮ, ಗೈಡ್ ಕ್ಯಾಪ್ಟನ್, ಕಿರಿಯ ಪ್ರಾಥಮಿಕ ಶಾಲೆ ಮರಗಲ್, ಕೋಲಾರ ಜಿಲ್ಲೆ
12. ಶ್ರೀ ಎಂ. ಮಹದೇವ್, ಆಜೀವ ಸದಸ್ಯರು, ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್, ಕರ್ನಾಟಕ, ಬೆಂಗಳೂರು
13. ಶ್ರೀ ಓ. ಚನ್ನವೀರಪ್ಪ, ನಿವೃತ್ತ ಗುಂಪು 'ಡಿ' ನೌಕರರು, ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್, ಕರ್ನಾಟಕ, ಕೊಂಡಜ್ಜಿ



**Earth Provides enough to satisfy every man's needs, but not every man's greed.**
**- Mahatma Gandhi**

# ಜಿಲ್ಲಾ ವಾರ್ತೆಗಳು

## ಬಳ್ಳಾರಿ

ದಿನಾಂಕ 15-06-2016 ರಂದು ಜಿಲ್ಲಾ ಸ್ಕೌಟ್ ಭವನದಲ್ಲಿ, ಬಳ್ಳಾರಿ ತಾಲ್ಲೂಕಿನ ಸ್ಕೌಟರ್-ಗೈಡರ್ ಸಮಾವೇಶವನ್ನು ಹಮ್ಮಿಕೊಳ್ಳಲಾಗಿತ್ತು. ಶ್ರೀ ಶಿವಕುಮಾರಸ್ವಾಮಿರವರು ಈ ಕಾರ್ಯಕ್ರಮದಲ್ಲಿ ಉಪಸ್ಥಿತರಿದ್ದರು.

ಕಾರ್ಯಕ್ರಮದ ಉದ್ಘಾಟನೆಯನ್ನು ಶ್ರೀ ವೀರಣ್ಣ ಎಸ್. ಜತ್ತಿ, ಉಪನಿರ್ದೇಶಕರು, ಸಾರ್ವಜನಿಕ ಶಿಕ್ಷಣ ಇಲಾಖೆ ಬಳ್ಳಾರಿ ಹಾಗೂ ಜಿಲ್ಲಾ ಮುಖ್ಯ ಆಯುಕ್ತರು, ಜಿಲ್ಲಾ ಸಂಸ್ಥೆ, ಬಳ್ಳಾರಿ ಇವರು ದೀಪ ಬೆಳಗಿಸುವುದರ ಮೂಲಕ ಕಾರ್ಯಕ್ರಮಕ್ಕೆ ಚಲನೆ ನೀಡಿ, ಪ್ರತಿಯೊಂದು ಶಾಲೆಯಲ್ಲಿ ಸ್ಕೌಟ್-ಗೈಡ್, ಕಬ್-ಬುಲ್‌ಬುಲ್ ಘಟಕಗಳು ಇರಬೇಕೆಂದು ಸೂಚಿಸಿದರು. ಮಕ್ಕಳ ಹಕ್ಕುಗಳನ್ನು ಶಿಕ್ಷಕರು ಕಸಿದುಕೊಳ್ಳಬಾರದು, ಸ್ಕೌಟ್-ಗೈಡ್ ಚಟುವಟಿಕೆಗಳಿಂದ ಮಕ್ಕಳಿಗೆ ದೇಸ ಪ್ರೇಮ, ಶಿಸ್ತು, ಸಮಯ ಪಾಲನೆ, ಸ್ವಚ್ಛತೆ ಮುಂತಾದ ಗುಣಗಳನ್ನು ಬೆಳೆಸಲು ಹೇಳಿದರು.

ಜಿಲ್ಲಾ ಆಯುಕ್ತರು (ಸ್ಕೌಟ್) ಆದ ಶ್ರೀ ಕೆ. ವೀರೇಶ್ ಮಾತನಾಡಿ ಶಿಕ್ಷಕರು ಶಾಲೆಗಳಲ್ಲಿ ಸ್ಕೌಟ್-ಗೈಡ್ ಚಟುವಟಿಕೆಗಳಲ್ಲಿ ತೊಡಗಿಕೊಂಡು ಮಕ್ಕಳಿಗೆ ಶಿಸ್ತುಬದ್ಧ ಜೀವನ ನಡೆಸಲು ತಿಳಿಸಿದರು. ತಾಲೂಕು ದೈಹಿಕ ಶಿಕ್ಷಣ ಪರಿವೀಕ್ಷಕರಾದ ಶ್ರೀ ಎರ್ರಿಸ್ವಾಮಿ ಮಾತನಾಡಿ ಸ್ಕೌಟ್-ಗೈಡ್‌ಗಳು ಶಿಸ್ತಿನ ಸಿಪಾಯಿಗಳು ಹಾಗು ಇದರ ಸಮವಸ್ತ್ರಗಳು ಸಮಾಜದಲ್ಲಿ ಆಕರ್ಷಣೀಯವಾಗಿ ಇರುತ್ತವೆ ಎಂದು ಹೇಳಿದರು. ಹಾಗು ಸ್ಕೌಟ್-ಗೈಡ್ ಶಿಕ್ಷಣದ ಬಗ್ಗೆ ಹೆಚ್ಚು ಒತ್ತುಕೊಟ್ಟು ಶಾಲೆಗಳಲ್ಲಿ ದಳಗಳನ್ನು ತೆರೆಯಲು ಮನವಿ ಮಾಡಿದರು.

ಶ್ರೀ ಶಿವಕುಮಾರಸ್ವಾಮಿ ಕ್ಷೇತ್ರ ಶಿಕ್ಷಣಾಧಿಕಾರಿಗಳು ಶುಭ ಹಾರೈಸಿದರು. ಸದರಿ ಕಾರ್ಯಕ್ರಮದಲ್ಲಿ ಒಟ್ಟು 80 ಶಿಕ್ಷಕ-ಶಿಕ್ಷಕಿಯರು ಭಾಗವಹಿಸಿದ್ದರು.

* ದಿನಾಂಕ 17-06-2016 ರಂದು 6ನೇ ವಾರ್ಡ್, ಸರ್ಕಾರಿ ಮಾದರಿ ಹಿರಿಯ ಪ್ರಾಥಮಿಕ ಶಾಲೆ, ಸಿರುಗುಪ್ಪದಲ್ಲಿ ಒಂದು ದಿನದ ಸ್ಕೌಟರ್ ಗೈಡರ್ ಸಮಾವೇಶವನ್ನು ಹಮ್ಮಿಕೊಳ್ಳಲಾಗಿತ್ತು. ಈ ಸಮಾವೇಶದಲ್ಲಿ ಕ್ಷೇತ್ರ ಶಿಕ್ಷಣಾಧಿಕಾರಿಗಳಾದ ಶ್ರೀ ಶ್ರೀನಿವಾಸ ಮೂರ್ತಿ, ತಾಲ್ಲೂಕು ದೈಹಿಕ ಶಿಕ್ಷಣ ಅಧಿಕಾರಿಯಾದ ಶ್ರೀ ವಿಜಯ ರಂಗರೆಡ್ಡಿ, ಸರ್ಕಾರಿ ನೌಕರರ ಸಂಘದ ಅಧ್ಯಕ್ಷರಾದ ಶ್ರೀ ಹನುಮಂತಪ್ಪ, ಕಾರ್ಯದರ್ಶಿಯಾದ ಶ್ರೀ ನಟರಾಜಸ್ವಾಮಿ, ಸಿ.ಆರ್.ಪಿ. ಶ್ರೀ ಜಗದೀಶ್ ಈ ಕಾರ್ಯಕ್ರಮದಲ್ಲಿ ಉಪಸ್ಥಿತರಿದ್ದರು.

ಸದರಿ ಸಮಾವೇಶದಲ್ಲಿ 40 ಸ್ಕೌಟರ್-ಗೈಡರ್ಸ್ ಭಾಗವಹಿಸಿದ್ದರು. ಕ್ಷೇತ್ರ ಶಿಕ್ಷಣಾಧಿಕಾರಿಗಳು ತಮ್ಮ ಬಾಷಣದಲ್ಲಿ ಶಾಲೆಗಳಲ್ಲಿ ಶಿಕ್ಷಕರು ಸ್ಕೌಟ್-ಗೈಡ್ ಚಟುವಟಿಕೆಗಳನ್ನು ವಾರದಲ್ಲಿ ಒಂದು ಅವಧಿ ತೆಗೆದುಕೊಂಡು ಮಕ್ಕಳನ್ನು ರಾಜ್ಯ ಪುರಸ್ಕಾರ ಮತ್ತು ರಾಷ್ಟ್ರಪತಿ ಪದಕ ಪಡೆಯಲು ಹೆಚ್ಚು ಶ್ರಮಿಸಬೇಕೆಂದು ಕರೆಯಿತ್ತರು. ತಾಲೂಕು ದೈಹಿಕ ಶಿಕ್ಷಣ ಪರಿವೀಕ್ಷಕರಾದ ಶ್ರೀ ವಿಜಯರಂಗರೆಡ್ಡಿಯವರು ಸ್ಕೌಟ್-ಗೈಡ್ ಒಂದು ಶಿಸ್ತಿನ ಸಂಸ್ಥೆಯಾಗಿದ್ದು, ಇದರಲ್ಲಿ ತರಬೇತಿಯನ್ನು ಪಡೆದ ಶಿಕ್ಷಕರು ಮತ್ತು ಸ್ಕೌಟ್-ಗೈಡ್‌ಗಳು ಉತ್ತಮ ಸಮಾಜ ಸೇವೆ ಹಾಗೂ ಸ್ವಯಂ ಸೇವೆಯನ್ನು ಮಾಡುವಂತಹ ಮನಸ್ಸಿನವರಾಗಿರುತ್ತಾರೆ ಎಂದು ತಿಳಿಸಿಕೊಟ್ಟರು. ಕಾರ್ಯದಶಿಯಾದ ಶ್ರೀ ನಟರಾಜಸ್ವಾಮಿಯವರು ಸ್ವಾಗತವನ್ನು ಕೋರಿದರು. ವಂದನಾರ್ಪಣೆಯನ್ನು ಶ್ರೀ ಶಿವಶರಣ ಸ್ವಾಮಿ ಮಾಡಿದರು.

* ದಿನಾಂಕ 21-06-2016 ರಂದು ಜಿಲ್ಲಾ ಸ್ಕೌಟ್ಸ್-ಗೈಡ್ಸ್ ಭವನದಲ್ಲಿ ಅಂತರ್ರಾಷ್ಟ್ರೀಯ ಯೋಗ ದಿನಾಚರಣೆ ಕಾರ್ಯಕ್ರಮವನ್ನು ಹಮ್ಮಿಕೊಳ್ಳಲಾಗಿತ್ತು. ಈ ಕಾರ್ಯಕ್ರಮಕ್ಕೆ ಯೋಗ ಗುರುಗಳಾದ ಶ್ರೀ ಮಲ್ಲಿಕಾರ್ಜುನ ಗೌಡರು, ಜಿಲ್ಲಾ ಆಯುಕ್ತರಾದ ಶ್ರೀ ಕೆ.ವೀರೇಶ್, ಜಿಲ್ಲಾ ದೈಹಿಕ ಶಿಕ್ಷಣಾಧಿಕಾರಿ, ಶ್ರೀ ರೆಹಮತುಲ್ಲಾ, ಸರಳಾದೇವಿ ಪ್ರಥಮ ದರ್ಜೆ



ಕಾಲೇಜು ರೋವರ್ ಲೀಡರ್ ಶ್ರೀ ರಾಮಾಂಜನೇಯ ಇವರುಗಳು ಉಪಸ್ಥಿತರಿದ್ದರು. ದೀಪ ಬೆಳಗುವುದರ ಮೂಲಕ ಜಿಲ್ಲಾ ಆಯುಕ್ತರು(ಸ್ಕೌ) ಶ್ರೀ ಕೆ.ವೀರೇಶ್ ರವರು ಉದ್ಘಾಟಿಸಿದರು. ನಂತರ ಅವರು ಯೋಗದ ಮಹತ್ವ ಹಾಗೂ ಆಚರಣೆ ಬಗ್ಗೆ ಮಾತನಾಡಿದರು. ಯೋಗ ಗುರುಗಳಾದ ಶ್ರೀ ಮಲ್ಲಿಕಾರ್ಜುನ ಗೌಡರು ಯೋಗ, ಧ್ಯಾನ, ಪ್ರಾಣಾಯಾಮಗಳ ಬಗ್ಗೆ ವಿವರಗಳನ್ನು ಸ್ಕೌಟ್-ಗೈಡ್‌ಗಳಿಗೆ ತಿಳಿಸಿದರು. ಈ ಕಾರ್ಯಕ್ರಮದಲ್ಲಿ 75 ಸ್ಕೌಟ್ಸ್-ಗೈಡ್ಸ್, ರೋವರ್‌ಗಳು ಭಾಗವಹಿಸಿದ್ದರು.

## ಬೆಳಗಾವಿ

ದಿನಾಂಕ 06-06-2016 ರಂದು ಭಾರತ್ ಸ್ಕೌಟ್ಸ್-ಗೈಡ್ಸ್ ಜಿಲ್ಲಾ ಸಂಸ್ಥೆ ಬೆಳಗಾವಿಯ ಅಭಿವೃದ್ಧಿ ಸಭೆಯು ಜಿಲ್ಲಾಧಿಕಾರಿಗಳ ಅಧ್ಯಕ್ಷತೆಯಲ್ಲಿ ಜಿಲ್ಲಾಧಿಕಾರಿಗಳ ಸಭಾಂಗಣದಲ್ಲಿ ಜರುಗಿತು. ಸಭೆಯಲ್ಲಿ ರಾಜ್ಯ ಮುಖ್ಯ ಆಯುಕ್ತರಾದ ಶ್ರೀ ಪಿ.ಜಿ.ಅರ್. ಸಿಂಧ್ಯರವರು ಮುಖ್ಯ ಅತಿಥಿಗಳಾಗಿ ಭಾಗವಹಿಸಿದ್ದರು. ಶ್ರೀ ಜಿ.ಬಿ. ಮನ್ನಿಕೇರಿ, ಜಿಲ್ಲಾ ಆಯುಕ್ತರು ಸ್ಕೌಟ್ಸ್ ಹಾಗೂ ಉಪನಿರ್ದೇಶಕರು ಸಾರ್ವಜನಿಕ ಶಿಕ್ಷಣ ಇಲಾಖೆ, ಚಿಕ್ಕೋಡಿ, ಶ್ರೀ ಡಿ.ಎಂ. ದಾನೋಜಿ, ಪ್ರಾಂಶುಪಾಲರು ಡಾಯಟ್ ಮಣ್ಣೂರ, ವಿಭಾಗಿಯ ಆಯುಕ್ತರಾದ ಶ್ರೀ ಎಂ.ಎಂ. ಲೋಂಡೆ, ಜಿಲ್ಲಾ ಮುಖ್ಯ ಆಯುಕ್ತರಾದ ಶ್ರೀ ಎಸ್. ವೈ. ಹುಡೇದ ಜಿಲ್ಲಾ ಕೋಶಾಧಿಕಾರಿಗಳಾದ ಶ್ರೀ ಎಸ್.ಸಿ. ಕಟ್ಟಿಮನಿ, ಜಿಲ್ಲಾ ಕಾರ್ಯದರ್ಶಿ ಶ್ರೀ ಎಸ್. ನದಾಫ ಹಾಗೂ ಜಿಲ್ಲೆಯ 15 ವಲಯಗಳ ಕ್ಷೇತ್ರ ಶಿಕ್ಷಣಾಧಿಕಾರಿಗಳು ಮತ್ತು ದೈಹಿಕ ಶಿಕ್ಷಣ ಪರಿವೀಕ್ಷಕರುಗಳು ಭಾಗವಹಿಸಿದ್ದರು.

* ದಿನಾಂಕ 12-06-2016 ರಂದು ಜಿಲ್ಲಾಡಳಿತ, ಜಿಲ್ಲಾ ಕಾನೂನು ಸೇವೆಗಳ ಪ್ರಾಧಿಕಾರ, ಕಾರ್ಮಿಕ ಇಲಾಖೆ ಹಾಗೂ ಜಿಲ್ಲಾ ಬಾಲಕಾರ್ಮಿಕ ಯೋಜನಾ ಸಂಸ್ಥೆ ಬೆಳಗಾವಿ ಇವರ ಸಂಯುಕ್ತ ಆಶ್ರಯದಲ್ಲಿ ವಿಶ್ವ ಬಾಲಕಾರ್ಮಿಕ ಪದ್ಧತಿ ವಿರೋಧಿ ದಿನಾಚರಣೆ ಕಾರ್ಯಕ್ರಮದಲ್ಲಿ ಬೆಳಗಾವಿಯ ನಗರ ವಲಯದಿಂದ ಜಾಗೃತಿ ಜಾಥಾದಲ್ಲಿ 100ಕ್ಕೂ ಹೆಚ್ಚು ಸ್ಕೌಟ್-ಗೈಡ್‌ಗಳು ಭಾಗವಹಿಸಿದ್ದರು. ಜಿಲ್ಲಾ ಮುಖ್ಯ ಆಯುಕ್ತರಾದ ಶ್ರೀ ಎಸ್.ವೈ. ಹುಡೇದ, ಜಿಲ್ಲಾ ಕಾರ್ಯದರ್ಶಿ ಶ್ರೀ ಎಸ್.ಎಂ. ನದಾಫ, ಜಿಲ್ಲಾ ಕೋಶಾಧಿಕಾರಿ ಶ್ರೀ ಎಸ್.ಸಿ. ಕಟ್ಟಿಮನಿ, ಜಿಲ್ಲಾ ಕೇಂದ್ರ ಸ್ಥಾನಿಕ ಆಯುಕ್ತರಾದ ಶ್ರೀ ಟಿ.ಡಿ. ಕಾಂಬೋಜಿ ಹಾಗೂ ಜಿಲ್ಲಾ ಸಂಘಟಕರುಗಳು ಭಾಗವಹಿಸಿದ್ದರು.

* ದಿನಾಂಕ 15-06-2016 ರಂದು ಚಿಕ್ಕೋಡಿಯ ತಾಲ್ಲೂಕು ಪಂಚಾಯತಿ ಸಭಾ ಭವನದಲ್ಲಿ ತಾಲೂಕಾ ಕಾನೂನು ಸೇವಾ ಸಮಿತಿ ಚಿಕ್ಕೋಡಿ. ನ್ಯಾಯವಾದಿಗಳ ಸಂಘ ಚಿಕ್ಕೋಡಿ, ಇವರ ಸಂಯುಕ್ತ ಆಶ್ರಯದಲ್ಲಿ ನಡೆದ ಬಾಲಕಾರ್ಮಿಕ ಪದ್ಧತಿ ವಿರೋಧಿ ದಿನಾಚರಣೆಯು ಚಿಕ್ಕೋಡಿ ಜಿಲ್ಲಾ ನ್ಯಾಯಾಧೀಶರಾದ ಶ್ರೀ ಮಹಾಂತಪ್ಪ ಇವರ ಉಪಸ್ಥಿತಿಯಲ್ಲಿ ಜರುಗಿತು. ಈ ಸಮಾರಂಭದಲ್ಲಿ 40ಕ್ಕೂ ಹೆಚ್ಚು ಸ್ಕೌಟ್-ಗೈಡ್‌ಗಳು ಭಾಗವಹಿಸಿದ್ದರು. ಕ್ಷೇತ್ರ ಶಿಕ್ಷಣಾಧಿಕಾರಿಗಳು ಶ್ರೀ ಬಿ.ಎ. ಮೇಕನಮರಡಿ, ದೈಹಿಕ ಶಿಕ್ಷಣ ಪರಿವೀಕ್ಷಕರಾದ ಶ್ರೀ ಎಂ.ಕೆ. ಪಾರ್ಥನಹಳ್ಳಿ, ಜಿಲ್ಲಾ ಸಂಘಕಟರಾದ ಶ್ರೀ ಎನ್. ಬಿ. ಗುಡಸಿ, ಶ್ರೀ ಡಿ.ಬಿ. ಅತ್ತಾರ ಹಾಗೂ ಸ್ಕೌಟರ್, ಗೈಡರ್‌ಗಳು ಉಪಸ್ಥಿತರಿದ್ದರು.

* ದಿನಾಂಕ 17-06-2016 ರಂದು ಬೆಳಗಾವಿಯ ಪೋದಾರ್ ಇಂಟರ್ ನ್ಯಾಷನಲ್ ಶಾಲೆಯಲ್ಲಿ ಜಿಲ್ಲಾ ಕಾನೂನು ಸೇವೆಗಳ ಪ್ರಾಧಿಕಾರ, ಕರ್ನಾಟಕ ರಾಜ್ಯ ಅಗ್ನಿಶಾಮಕ ಮತ್ತು ತುರ್ತು ಸೇವೆಗಳು, ಲಯನ್ಸ್ ಕ್ಲಬ್ ಇಂಟರ್ ನ್ಯಾಷನಲ್, ಭಾರತ್ ಸ್ಕೌಟ್ಸ್-ಗೈಡ್ಸ್ ಜಿಲ್ಲಾ ಸಂಸ್ಥೆ, ಬೆಳಗಾವಿ ಹಾಗೂ ಪೊದ್ದಾರ್ ಇಂಟರ್ ನ್ಯಾಷನಲ್ ಶಾಲೆ ಬೆಳಗಾವಿ ಇವರ ಸಂಯುಕ್ತಾಶ್ರಯದಲ್ಲಿ "ಅಗ್ನಿ ಅನಾಹುತ ಹಾಗು ಅವುಗಳನ್ನು ತಡೆಗಟ್ಟುವ ಮುನ್ನೆಚ್ಚರಿಕೆಯ ಕ್ರಮ"ಗಳ ಕುರಿತಾದ ಅಣುಕು ಪ್ರದರ್ಶನದಲ್ಲಿ 125ಕ್ಕೂ ಹೆಚ್ಚು ಸ್ಕೌಟ್-ಗೈಡ್‌ಗಳು ಭಾಗವಹಿಸಿದ್ದರು. ಜಿಲ್ಲಾ ಸಂಸ್ಥೆಯ ಪದಾಧಿಕಾರಿಗಳಾದ ಶ್ರೀ ಎಸ್.ವೈ. ಹುಡೇದ, ಜಿಲ್ಲಾ ಮುಖ್ಯ ಆಯುಕ್ತ, ಜಿಲ್ಲಾ ಕೇಂದ್ರ ಸ್ಥಾನಿಕ ಆಯುಕ್ತರಾದ ಶ್ರೀ ಟಿ.ಡಿ. ಕಾಂಬೋಜಿ, ಜಿಲ್ಲಾ ಕಾರ್ಯದರ್ಶಿ ಶ್ರೀ ಎಸ್. ಎಂ. ನದಾಫ, ಜಿಲ್ಲಾ ಸಂಘಟಕ ಶ್ರೀ ಡಿ.ಬಿ. ಅತ್ತಾರ ಉಪಸ್ಥಿತರಿದ್ದರು.



## ಬೆಂಗಳೂರು ದಕ್ಷಿಣ

ವಿಶ್ವ ಪರಿಸರ ದಿನಾಚರಣೆ ಪ್ರಯುಕ್ತ ಆನೇಕಲ್‌ನ ಭಗತ್ ಸಿಂಗ್ ಓಪನ್ ರೋವರ್ ತಂಡ ಹಾಗೂ ರಾಣಿ ಚೆನ್ನಮ್ಮ ಓಪನ್ ರೇಂಜರ್ ತಂಡಗಳು ಇಲ್ಲಿನ ಸರ್ಕಾರಿ ಹಳೆ ಮಾಧ್ಯಮಿಕ ಪಾಠಶಾಲೆ, ಸರ್ಕಾರಿ ಮಾದರಿ ಹೆಣ್ಣುಮಕ್ಕಳ ಪಾಠಶಾಲೆ, ಸರ್ಕಾರಿ ಹೊಸ ಮಾಧ್ಯಮಿಕ ಪಾಠಶಾಲೆಯ ಆವರಣ ಹಾಗೂ ಆಟದ ಮೈದಾನ, ಸರ್ಕಾರಿ ಉರ್ದು ಹಿರಿಯ ಪ್ರಾಥಮಿಕ ಶಾಲೆ, ಎ.ಎಸ್.ಬಿ. ಸರ್ಕಾರಿ ಪದವಿ ಪೂರ್ವ ಕಾಲೇಜಿನ ಆಟದ ಮೈದಾನ, ಕಂಬದ ಗಣಪತಿ ದೇವಾಲಯದ ಆವರಣ ಮತ್ತು ಕ್ಷೇತ್ರ ಶಿಕ್ಷಣಾಧಿಕಾರಿಗಳ ಕಛೇರಿ ಆವರಣದಲ್ಲಿ ಸಸಿಗಳನ್ನು ನೆಟ್ಟು ಅವುಗಳಿಗೆ ರಕ್ಷಣಾ ಬೇಲಿಗಳನ್ನು ಕಟ್ಟಿದರು.

ಕಾರ್ಯಕ್ರಮವನ್ನು ಉದ್ಘಾಟಿಸಿದ ತಾಲ್ಲೂಕು ಸರ್ಕಾರಿ ನೌಕರರ ಸಂಘದ ಅಧ್ಯಕ್ಷ ವಿ.ಕೆ. ಗವಿರಂಗಯ್ಯ ಮಾತನಾಡಿ ಮನುಷ್ಯನ ಉದಾಸೀನತೆ, ತಿಳಿಗೇಡಿತನದಿಂದ ನಿಸರ್ಗ ಬಸವಳಿಯುತ್ತಾ ಸಾಗುತ್ತಿದೆ. ಈ ಪ್ರಕ್ರಿಯೆಯಲ್ಲಿ ನಾವೆಲ್ಲರೂ ಪ್ರತ್ಯಕ್ಷ ಅಥವಾ ಪರೋಕ್ಷವಾಗಿ ಭಾಗಿಗಳೇ ಹೌದು. ಆದುದರಿಂದ ಅದರ ಸುಧಾರಣೆಯ ಹೊಣೆಯನ್ನು ಸಹ ನಾವೇ ಹೊತ್ತು ಪರಿಸರ ಸಂರಕ್ಷಣೆಯನ್ನು ಮಾಡಬೇಕಿದೆ ಎಂದು ನುಡಿದರು.

ಶಿಕ್ಷಣ ಸಂಯೋಜಕ ಶ್ರೀ ವಿ. ಪ್ರಕಾಶ್ ಮಾತನಾಡಿ ಜಗತ್ತು ಇಂದು ಎದುರಿಸುತ್ತಿರುವ ಅತ್ಯಂತ ದೊಡ್ಡ ಸಮಸ್ಯೆ ಎಂದರೆ ಅದು ಪರಿಸರ ಮಾಲಿನ್ಯ. ಇದರಿಂದ ಭೂಮಿಯ ಮೇಲೆ ಸರಿಪಡಿಸಲಾಗದಷ್ಟು ಸಮಸ್ಯೆಗಳು ಹುಟ್ಟಿಕೊಳ್ಳುತ್ತಿದೆ. ಪರಿಸ್ಥಿತಿ ಹೀಗೇ ಮುಂದುವರೆದರೆ ಜಗತ್ತು ವಿನಾಶದತ್ತ ಸಾಗುತ್ತದೆ ಎಂದು ನುಡಿದರು.

ಭಗತ್ ಸಿಂಗ್ ಓಪನ್ ರೋವರ್ ತಂಡದ ನಾಯಕ ಹಾಗು ಸ್ಥಳೀಯ ಸಂಸ್ಥೆಯ ಕಾರ್ಯದರ್ಶಿ ಶ್ರೀ ಎ.ಎನ್. ನರೇಂದ್ರ ಕುಮಾರ್ ಮಾತನಾಡಿ ಅರಣ್ಯಗಳ ನಾಶ, ಕೆರೆ ಕುಂಟೆಗಳ ಒತ್ತುವರಿ, ರಸ್ತೆ ಅಗಲೀಕರಣದ ಸಂದರ್ಭಗಳಲ್ಲಿ ಮರಗಳನ್ನು ಕಡಿಯಲಾಗುತ್ತಿದೆ. ಮರಗಳು ಮಾನವ ಕುಲಕ್ಕಷ್ಟೇ ಅಲ್ಲದೆ ಸಕಲ ಜೀವರಾಶಿಗಳಿಗೂ ಸಹ ಸಮತೋಲನೆ ಆಗಬೇಕಾದರೆ ಹೆಚ್ಚು ಹೆಚ್ಚು ಮರ ಗಿಡಗಳನ್ನು ನೆಟ್ಟು ಅವನ್ನು ರಕ್ಷಿಸಿ, ಪೋಷಿಸಿ ಬೆಳೆಸುವ ಜವಾಬ್ದಾರಿ ನಮ್ಮೆಲ್ಲರ ಮೇಲಿದೆ ಎಂದು ನುಡಿದರು.

* Rover Scouts of HAL Rover Crew along with Senior Officers of HAL under took Oath on SWATCHH BHARAT PAKHAWADA on 1st May 2016 at HAL Office's Enclave. Sri SUVARNA RAJU, Chairman and Managing Director, HAL administrated The SWATCHH BHARAT Oath.

The Rovers of HAL Rover Crew, Scouts, Cubs and Under privileged children along with Senior Officers and their families undertook a route march Carrying Placards depicting SWATCHH BHARAT Slogan **"CLEAN INDIA GREEN INDIA"** The Rovers also conducted painting competition for children on SWATCHH BHARAT on 15th May 2016.

**When You Own Your Breath,**
**Nobody can Steel Your Peace.**

## ಚಿತ್ರದುರ್ಗ

ದಿನಾಂಕ 05-06-2016 ರಂದು ವಿಶ್ವ ಪರಿಸರ ದಿನಾಚರಣೆ ಅಂಗವಾಗಿ ಸಸಿ ನೆಡುವ ಕಾರ್ಯಕ್ರಮ ಹಾಗು ಮಾರ್ಗಸೂಚಿ ಫಲಕಗಳನ್ನು ನಿಲ್ಲಿಸುವ ಕಾರ್ಯಕ್ರಮವನ್ನು ಎಸ್.ಆರ್.ಎಸ್. ಶಿಕ್ಷಣ ಸಂಸ್ಥೆ ಮತ್ತು ಭಾರತ್ ಸ್ಕೌಟ್ಸ್-ಗೈಡ್ಸ್ ಜಿಲ್ಲಾ ಸಂಸ್ಥೆ ಸಹಭಾಗಿತ್ವದಲ್ಲಿ ಹಮ್ಮಿಕೊಳ್ಳಲಾಗಿತ್ತು. ಶ್ರೀ ರವೀಂದ್ರ , ಅಪರ ಜಿಲ್ಲಾದಿಕಾರಿಗಳು ಸಸಿ ನೆಡುವ ಮೂಲಕ ಕಾರ್ಯಕ್ರಮಕ್ಕೆ ಚಾಲನೆಯನ್ನು ನೀಡಿದರು.

ಶ್ರೀ ರವೀಂದ್ರರವರು ಪರಿಸರ ಸಂರಕ್ಷಣೆ ಪ್ರತಿಯೊಬ್ಬನ ಕರ್ತವ್ಯ, ನಾವು ನಮ್ಮ ಹಕ್ಕುಗಳನ್ನು ಮಂಡಿಸುವ ಹಾಗೆ ಪರಿಸರವನ್ನು ಬೆಳೆಸುವ ಮತ್ತು ಪಾಲನೆಯನ್ನು ಮಾಡಬೇಕು, ಪ್ರತಿಯೊಬ್ಬರಲ್ಲೂ ಆ ಪ್ರಜ್ಞೆ ಬೆಳೆಯಬೇಕೆಂದು ತಿಳಿಸಿದರು.

ಜಿಲ್ಲಾ ಮುಖ್ಯ ಆಯುಕ್ತರು ಹಾಗೂ ಉಪನಿರ್ದೇಶಕರು, ಸಾರ್ವಜನಿಕ ಶಿಕ್ಷಣ ಇಲಾಖೆ ಆದ ಶ್ರೀ ಎಂ. ರೇವಣಸಿದ್ದಪ್ಪ ರವರು ಮಕ್ಕಳಲ್ಲಿ ಪರಿಸರ ಪ್ರಜ್ಞೆ ಬೆಳೆಸಬೇಕು ಹಾಗೂ ಜಿಲ್ಲೆಯ ಶಾಲೆಗಳಲ್ಲಿ ಮಕ್ಕಳನ್ನು ಗುಂಪುಗಳನ್ನಾಗಿ ಮಾಡಿ ಗಿಡಗಳನ್ನು ಶಾಲಾ ಆವರಣದಲ್ಲಿ ಬೆಳೆಸುವ ಬಗ್ಗೆ ಅರಿವು ಮೂಡಿಸಿ ಮಕ್ಕಳಿಗೆ ಈ ಜವಾಬ್ದಾರಿ ನೀಡಿ ಶಿಕ್ಷಕರು ವೀಕ್ಷಿಸುವಂತೆ ಮಾಡುವುದನ್ನು ಕಾರ್ಯರೂಪಕ್ಕೆ ತರುವುದಾಗಿ ಎಂದು ತಿಳಿಸಿದರು.

ಈ ಕಾರ್ಯಕ್ರಮದ ರೂವಾರಿಗಳಾದ ಶ್ರೀ ಬಿ.ಎ. ಲಿಂಗಾರೆಡ್ಡಿ ಎಸ್.ಆರ್.ಎಸ್. ಶಿಕ್ಷಣ ಸಂಸ್ಥೆಯ ಅಧ್ಯಕ್ಷರು, ಇವರು ತಮ್ಮ ಮಾತಿನಲ್ಲಿ "ಮನೆಗೊಂದು ಗಿಡವನ್ನು ನೆಟ್ಟು ಪರಿಸರವನ್ನು ಸಂರಕ್ಷಿಸಬೇಕು. "ಕಾಡನ್ನು ಬೆಳೆಸಿ ಮಳೆಯನ್ನು ತರಿಸಿ". ಪರಿಸರವನ್ನು ಸಂರಕ್ಷಿಸದಿದ್ದಲ್ಲಿ ಭವಿಷ್ಯದ ದಿನಗಳಲ್ಲಿ ಕುಡಿಯುವ ನೀರಿಗಾಗಿ ಕಾದಾಟ ಶುರುವಾಗಲಿದೆ ಹಾಗು ಇತ್ತೀಚಿನ ದಿನಗಳಲ್ಲಿ ತಾಪಮಾನ ಹೆಚ್ಚುತ್ತಿದೆ ಇದನ್ನು ಕಡಿಮೆಗೊಳಸಬೇಕಾದರೆ ಅರಣ್ಯ ಸಂಪತ್ತು ಬೆಳೆಯಬೇಕು ಎಂದರು. ಜಿಲ್ಲಾ ಸಂಸ್ಥೆಯಿಂದ ಜಿಲ್ಲೆಯ 100 ಹಳ್ಳಿಗಳನ್ನು ಆಯ್ಕೆಮಾಡಿ 10,000 ಸಸಿಗಳನ್ನು ನೆಡುವ ಬಗ್ಗೆ ತಿಳಿಸಿದರು. ಜಿಲ್ಲಾ ಪದಾಧಿಕಾರಿಗಳು ಈ ಸಂದರ್ಭದಲ್ಲಿ ಉಪಸ್ಥಿತರಿದ್ದರು.

ಇದೇ ಸಂದರ್ಭದಲ್ಲಿ ಟೀಚರ್ಸ್ ಕಾಲೋನಿ, ಕೆ.ಎಸ್.ಆರ್.ಟಿ.ಸಿ., ಬಡಾವಣೆ, ಮಾಸ್ತಮ್ಮ ಲೇಔಟ್, ದೊರೆಸ್ವಾಮಿ ಬಡಾವಣೆಗಳ ಅಡ್ಡರಸ್ತೆಗಳಿಗೆ ನಾಮಫಲಕಗಳನ್ನು ಅಳವಡಿಸಲಾಯಿತು ಮತ್ತು ರಸ್ತೆಯ ಎರಡೂ ಬದಿಯಲ್ಲಿ ಸಸಿಗಳನ್ನು ನೆಡಲಾಯಿತು.



## ದಕ್ಷಿಣ ಕನ್ನಡ

ದಿನಾಂಕ 20-05-2016 ರಿಂದ 26-05-2016 ರ ವರೆಗೆ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ದಕ್ಷಿಣ ಕನ್ನಡ ಜಿಲ್ಲಾ ಸಂಸ್ಥೆಯ ಜಿಲ್ಲಾ ಮಟ್ಟದ ಸ್ಕೌಟ್ಸ್-ಗೈಡ್ಸ್, ಕಬ್ಸ್-ಬುಲ್ಸ್, ಶಿಕ್ಷಕ-ಶಿಕ್ಷಕಿಯರ ಮುಂದುವರಿದ ತರಬೇತಿ ಶಿಬಿರವನ್ನು ಜಿಲ್ಲಾ ಸ್ಕೌಟ್ಸ್-ಗೈಡ್ಸ್ ತರಬೇತಿ ಕೇಂದ್ರ, ಪಿಲಿಕುಳ, ಮಂಗಳೂರು ಇಲ್ಲಿ ಸಂಘಟಿಸಲಾಯಿತು. ಉದ್ಘಾಟನೆ ಸಮಾರಂಭದಲ್ಲಿ ಶ್ರೀ ಆನಂದ ಅಡಿಗ ಎಲ್.ಟಿ.(ಸ್ಕೌ) ವಿಭಾಗ, ಶ್ರೀಮತಿ ಸುನೀತಾ ಎ.ಎಲ್.ಟಿ.(ಗೈ) ಗೈಡ್ ವಿಭಾಗ, ಜೂಲಿಯಾನ ಲಸ್ರಾದೋ ಎಲ್.ಟಿ.(ಕ) ಕಬ್ ವಿಭಾಗ ಮತ್ತು ಶ್ರೀಮತಿ ವಿಮಲ ಬಾಯಿ ಎ.ಎಲ್.ಟಿ.(ಫ್ಲ) ಬುಲ್ ಬುಲ್ ವಿಭಾಗಕ್ಕೆ ನಾಯಕರಾಗಿ ಉಪಸ್ಥಿತರಿದ್ದರು. ಜಿಲ್ಲಾ ತರಬೇತಿ ಆಯುಕ್ತರಾದ ಶ್ರೀ ಪ್ರತೀಮ್ ಕುಮಾರ್ ಸ್ವಾಗತಿಸಿ, ಶ್ರೀಮತಿ ಸುನೀತಾರವರು ಧನ್ಯವಾದವಿತ್ತರು. ನಾಲ್ಕು ವಿಭಾಗಗಳಲ್ಲಿ ಸೇರಿ ಒಟ್ಟು 52 ಶಿಬಿರಾರ್ಥಿಗಳು ಇದರ ಪ್ರಯೋಜನವನ್ನು ಪಡೆದರು. ಸಂಪನ್ಮೂಲ ಉಪನ್ಯಾಸಕರಾಗಿ ಶ್ರೀಯುತ ಗುರುಮೂರ್ತಿ ನಾಯ್ಕಪು ಎಲ್.ಟಿ.(ಸ್ಕೌ) ಶ್ರೀ ಜಿಮ್ಮಿ ಸಿಕ್ವೇರ ಎಲ್.ಟಿ.(ಸ್ಕೌ).

ಶ್ರೀಕೊಗ್ಗ ಗಾಣಿಗ ಎಲ್.ಟಿ(ಸ್ಕೌ) ಸೇವೆ ಸಲ್ಲಿಸಿದರು. ಜಿಲ್ಲಾ ಮುಖ್ಯ ಆಯುಕ್ತರಾದ ಶ್ರೀ ಎನ್.ಜಿ. ಮೋಹನ್ ಹಾಗೂ ಸ್ಕೌಟ್ ಆಯುಕ್ತರಾದ ಶ್ರೀ ರಾಮಶೆಷ ಶೆಟ್ಟಿ, ಜಿಲ್ಲಾ ವಿದ್ಯಾಂಗ ಉಪನಿರ್ದೇಶಕರಾದ ಶ್ರೀ ವಾಲ್ಟರ್ ಡಿಮೆಲ್ಲೊರವರು ಶಿಬಿರಕ್ಕೆ ಭೇಟಿ ನೀಡಿ ಶಿಬಿರಾರ್ಥಿಗಳ ಕುರಿತು ಮಾತನಾಡಿ ಪ್ರಶಂಶಿಸಿದರು.

ದಿನಾಂಕ 26-05-2015 ರಂದು ಜಿಲ್ಲಾ ತರಬೇತಿ ಆಯುಕ್ತೆ ಶ್ರೀಮತಿ ಸುನೀತಾರವರ ಸ್ವಾಗತ ಭಾಷಣದ ಮೂಲಕ ಶಿಬಿರದ ಮುಕ್ತಾಯ ಸಮಾರಂಭ ನಡೆಯಿತು. ಇದೇ ಸಂದರ್ಭದಲ್ಲಿ ಪುತ್ತೂರಿನ ವಿವೇಕಾನಂದ ಕನ್ನಡ ಮಾಧ್ಯಮ ಶಾಲೆಯ ಗೈಡರ್ ಶ್ರೀಮತಿ ಹರಿಣಾಕ್ಷಿಯವರಿಗೆ ಹಿಮಾಲಯ ವುಡ್‌ಬ್ಯಾಡ್ಜ್ ಪಾರ್ಚ್‌ಮೆಂಟ್‌ನ್ನು ಜಿಲ್ಲಾ ತರಬೇತಿ ಗೈಡ್ ಆಯುಕ್ತರಾದ ಶ್ರೀಮತಿ ಸುನೀತಾರವರು ನೀಡಿದರು. ಜಿಲ್ಲಾ ತರಬೇತಿ ಆಯುಕ್ತರಾದ (ಸ್ಕೌ) ಶ್ರೀ ಪ್ರತೀಮ್ ಕುಮಾರ್ ಶಿಬಿರಕ್ಕೆ ಸಹಕರಿಸಿದ ಎಲ್ಲರಿಗೂ ಧನ್ಯವಾದ ನೀಡಿದರು.

* ದಿನಾಂಕ 08-06-2016 ರಂದು ದಕ್ಷಿಣ ಕನ್ನಡ ಜಿಲ್ಲಾ ಸ್ಕೌಟ್ಸ್-ಗೈಡ್ಸ್ ಸಂಸ್ಥೆಯ ವತಿಯಿಂದ ಜಿಲ್ಲಾ ತರಬೇತಿ ಕೇಂದ್ರ ಪಿಲಿಕುಳದಲ್ಲಿ ಶುಭೋದಯ ಆಂಗ್ಲ ಮಾಧ್ಯಮ ಶಾಲೆ ಮತ್ತು ಸೈಂಟ್ ರೈಮಂಡ್ಸ್ ಆಂಗ್ಲ, ಮಾಧ್ಯಮ ಶಾಲೆಯ 65ಕ್ಕಿಂತ ಹೆಚ್ಚು ಸ್ಕೌಟ್ಸ್ ಮತ್ತು ಗೈಡ್ಸ್‌ಗಳು ಹಾಗು ಶಿಕ್ಷಕರು ಗಿಡಗಳನ್ನು ನೆಡುವ ಮೂಲಕ ವಿಶ್ವ ಪರಿಸರ ದಿನಾಚರಣೆಯನ್ನು ಆಚರಿಸಿದರು. ಶ್ರೀ ವಾಸುದೇವ ಬೋಳೂರು, ಸಂಸ್ಥೆಯ ಕೋಶಾಧಿಕಾರಿಯವರು ದೀಪ ಬೆಳಗಿಸಿ ಕಾರ್ಯಕ್ರಮ ಉದ್ಘಾಟನೆ ಮಾಡಿದರು. ಶ್ರೀ ಎನ್. ಜಿ. ಮೋಹನ್ ಜಿಲ್ಲಾ ಮುಖ್ಯ ಆಯುಕ್ತರು ಕಾರ್ಯಕ್ರಮದ ಅಧ್ಯಕ್ಷತೆಯನ್ನು ವಹಿಸಿದ್ದರು. ಅಧ್ಯಕ್ಷರ ಭಾಷಣದಲ್ಲಿ ಎಲ್ಲಾ ಮಕ್ಕಳು ಅವರ ಮನೆಯಲ್ಲಿ, ರಸ್ತೆಯ ಬದಿಯಲ್ಲಿ ಅಥವಾ ಶಾಲಾ ವಠಾರದಲ್ಲಿ ಗಿಡಗಳನ್ನು ನೆಟ್ಟು ಬೆಳೆಸಬೇಕು. ಮರಗಳನ್ನು ಬೆಳೆಸುವುದರಿಂದ ಮನುಷ್ಯರಿಗೆ ಬಹಳ ಪ್ರಯೋಜನವಾಗುತ್ತದೆ ಎಂದರು.

ಶ್ರೀ ವಾಸುದೇವ ಬೋಳೂರು ಮಾತಾಡಿ ವಿಶ್ವ ಪರಿಸರ ದಿನಾಚರಣೆಯನ್ನು ಭಾರತ ದೇಶದಲ್ಲಿ ಮಾತ್ರವಲ್ಲ ಇಡೀ ವಿಶ್ವದಲ್ಲಿ ಆಚರಿಸುತ್ತಾರೆ. ಈ ಆಚರಣೆ ಅಂಗವಾಗಿ ದೇಶಾದ್ಯಂತ ಗಿಡಗಳನ್ನು ನೆಡುವ ಮೂಲಕ ಪರಿಸರ ಸಮತೋಲನವನ್ನು ಉಳಿಸುವ ಉದ್ದೇಶದಿಂದ ಆಚರಿಸುತ್ತಾರೆ ಎಂದರು. ಕಾರ್ಯಕ್ರಮದಲ್ಲಿ ಜಿಲ್ಲಾ ಸ್ಕೌಟ್ ಆಯುಕ್ತರು ಶ್ರೀ ರಾಮಶೇಷ ಶೆಟ್ಟಿ ಹಾಗೂ ವ್ಯವಸ್ಥಾಪಕರು ಶ್ರೀ ಭಾಸ್ಕರ್ ರವರು ಉಪಸ್ಥಿತರಿದ್ದರು. ಶ್ರೀ ರಾಮಶೇಷ ಶೆಟ್ಟಿಯವರು ಧನ್ಯವಾದ ತಿಳಿಸಿದರು. ಶ್ರೀ ಭರತ್ ರಾಜ್ ಕೆ. ಜಿಲ್ಲಾ ಸಂಘಟಕರು (ಸ್ಕೌ) ಕಾರ್ಯಕ್ರಮವನ್ನು ನಿರೂಪಿಸಿದರು.

* ಇತ್ತೀಚೆಗೆ ನಡೆದ ಭಾರತ್ ಸ್ಕೌಟ್ಸ್-ಗೈಡ್ಸ್ ದಕ್ಷಿಣ ಕನ್ನಡ ಜಿಲ್ಲಾ ಸಂಸ್ಥೆ ಹಾಗು ಮಂಗಳೂರು ಸ್ಥಳೀಯ ಸಂಸ್ಥೆಯ ಜಂಟಿ ಆಶ್ರಯದಲ್ಲಿ ಸ್ಕೌಟ್ಸ್ ಭವನ ಲಾಲ್‌ಭಾಗ್‌ನಲ್ಲಿ ನಡೆದ ವಿಶ್ವಯೋಗ ದಿನಾಚರಣೆಯ ಉದ್ಘಾಟನೆಗೈದ ಡಾ. ಸಿಕಂದರ್ ಪಾಷ, ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣ (ಪ್ರಭಾರ) ಅಧಿಕಾರಿಯವರು ವಿದ್ಯಾರ್ಥಿಗಳಿಗೆ ತಮ್ಮ ಜೀವನ ಆರೋಗ್ಯವಾಗಿರಲು ಯೋಗ ತುಂಬಾ ಉಪಕಾರಿ ಎಂದು ತಿಳಿಸಿದರು.

ಕಾರ್ಯಕ್ರಮದಲ್ಲಿ ಅಧ್ಯಕ್ಷ ಸ್ಥಾನವನ್ನು ವಹಿಸಿದ ಜಿಲ್ಲಾ ಮುಖ್ಯ ಆಯುಕ್ತರಾದ ಶ್ರೀ ಎನ್.ಜಿ. ಮೋಹನ್‌ರವರು ವಿದ್ಯಾರ್ಥಿಗಳು ಆರೋಗ್ಯವಂತರಾಗಿರಬೇಕಾದರೆ ಯೋಗವು ತುಂಬಾ ಸಹಕಾರಿ ಅದನ್ನು ಅವರ ಜೀವನದಲ್ಲಿ ಶಿಕ್ಷಣದ ಅಂಗವಾಗಿ ಅಭ್ಯಾಸ ಮಾಡಬೇಕು ಎಂದರು. ವೇದಿಕೆಯಲ್ಲಿ ಸ್ಕೌಟ್ ಆಯುಕ್ತರಾದ ಶ್ರೀ ರಾಮಶೇಷ ಶೆಟ್ಟಿ, ಜಿಲ್ಲಾ ಕೋಶಾಧಿಕಾರಿ ಶ್ರೀ ವಾಸುದೇವ ಬೋಳೂರು, ಮಂಗಳೂರು ಸ್ಥಳೀಯ ಸಂಸ್ಥೆಯ ಅಧ್ಯಕ್ಷರಾದ ಶ್ರೀ ವಸಂತ್ ರಾವ್, ಜಿಲ್ಲಾ ಕಛೇರಿಯ ಮ್ಯಾನೇಜರ್ ಶ್ರೀ ಭಾಸ್ಕರ್ ಜಿಲ್ಲಾ ಸಂಘಟನಾ ಆಯುಕ್ತರು (ಗೈ) ಮತ್ತು ಯೋಗ ಶಿಕ್ಷಕಿ ಶ್ರೀಮತಿ ಚಂದ್ರಕಲಾ. ಎಸ್. ಜಿಲ್ಲಾ ಸಂಘಟಕರು ಶ್ರೀ ಭರತ್ ರಾಜ್ ಕೆ. ಉಪಸ್ಥಿತರಿದ್ದರು. ಈ ಕಾರ್ಯಕ್ರಮದಲ್ಲಿ ಒಟ್ಟು 150 ಸ್ಕೌಟ್-ಗೈಡ್ಸ್‌ಗಳು, ಸ್ಕೌಟರ್-ಗೈಡರ್‌ಗಳಾದ ಶ್ರೀಮತಿ ಜಯಶ್ರೀ ಎ.ಎಲ್.ಟಿ(ಗೈ) ಶ್ರೀಮತಿ ಶರ್ಮಿಳಾ, ಶ್ರೀ ದಿನೇಶ್ ಭಾಗವಹಿಸಿದ್ದರು.

ಶ್ರೀಮತಿ ಚಂದ್ರಕಲಾ ಎಸ್. ರವರು ಯೋಗದಿನಾಚರಣೆಯ ಸಂಕಲ್ಪ ಮಾಡಿಸಿ ವಿವಿಧ ಯೋಗಾಸನ ಹಾಗು ಪ್ರಾಣಾಯಾಮ ಮಾಡಿಸಿದರು. ಶ್ರೀ ವಸಂತ್ ರಾವ್ ಸ್ವಾಗತಿಸಿದರು. ಶ್ರೀ ಭರತ್ ರಾಜ್ ಕೆ. ಜಿಲ್ಲಾ ಸಂಘಟಕರು, ವಂದಿಸಿದರು. ಶ್ರೀಮತಿ ಚಂದ್ರಕಲಾ ಎಸ್. ಕಾರ್ಯಕ್ರಮ ನಿರೂಪಿಸಿದರು.

* ದಿನಾಂಕ 20-6-2016 ರಂದು ಭಾರತ್ ಸ್ಕೌಟ್ಸ್-ಗೈಡ್ಸ್ ದಕ್ಷಿಣ ಕನ್ನಡ ಜಿಲ್ಲಾ ಸಂಸ್ಥೆ ಇದರ ಆಶ್ರಯದಲ್ಲಿ ಜಿಲ್ಲಾ ತರಬೇತಿ ಕೇಂದ್ರ ಪಿಲಿಕುಳದಲ್ಲಿ ರೋವರ್ಸ್-ರೇಂಜರ್ಸ್‌ಗಳಿಗೆ ವಿಶ್ವ ಯೋಗ ದಿನಾಚರಣೆ ಕಾರ್ಯಕ್ರಮ ಹಮ್ಮಿಕೊಳ್ಳಲಾಯಿತು. ಈ ಕಾಯ್ಕ್ರಮದಲ್ಲಿ ವ್ಮಡಂತ್ಯಾರು ಸ್ಥಳೀಯ ಸಂಸ್ಥೆಯ ಕಾರ್ಯದರ್ಶಿಯಾದ ಶ್ರೀ ಶಾಂತಾರಾಮ್ ಪ್ರಭು ಎ.ಎಲ್.ಟಿ.(ಸ್ಕೌ) ವಿವೇಕಾನಂದ ಪದವಿ ಕಾಲೇಜಿನ ರೇಂಜರ್ ಲಿಡರ್‌ಗಳಾದ ಕು. ದಿವ್ಯ ಹಾಗೂ ಕು. ದೀಪಿಕಾ ಭಾಗವಹಿಸಿದ್ದರು. ಯೋಗ ಶಿಕ್ಷಕರು ಹಾಗೂ ಜಿಲ್ಲಾ ತರಬೇತಿ ಆಯುಕ್ತರು (ಸ್ಕೌ) ಶ್ರೀ ಪ್ರತೀಮ್ ಕುಮಾರ್ ಎಲ್.ಟಿ.(ಸ್ಕೌ) ಯೋಗ ಪ್ರಾತ್ಯಕ್ಷಿಕೆ ನೀಡಿ ಯೋಗದ ಮಹತ್ವವನ್ನು ತಿಳಿಸಿದರು. ಜಿಲ್ಲಾ ಸಂಘಟಕರಾದ ಶ್ರೀ ಭರತ್ ರಾಜ್ ಕೆ. ಕಾರ್ಯಕ್ರಮವನ್ನು ಸಂಘಟಿಸಿದರು.

## ದಾವಣಗೆರೆ

ದಿನಾಂಕ 26-05-2016 ರಂದು ದಾವಣಗೆರೆ ನಗರದ ರೈಲ್ವೇ ನಿಲ್ದಾನದಲ್ಲಿ ಸ್ವಚ್ಛ ಭಾರತ್ ಅಭಿಯಾನವನ್ನು ಸರ್ಕಾರಿ ಪ್ರಥಮ ದರ್ಜೆ ಕಾಲೇಜು ಮತ್ತು ಸ್ನಾತಕೋತ್ತರ ಪದವಿ ಕೇಂದ್ರ, ದಾವಣಗೆರೆಯ ರೋವರ್ಸ್ ಮತ್ತು ರೇಂಜರ್ಸ್‌ಗಳು, ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆ, ಹಳ್ಳದಕೇರೆ, ಹರಿಹರ ಶಾಲೆಯ ಸ್ಕೌಟ್ಸ್-ಗೈಡ್ಸ್‌ಗಳು ನೆರವೇರಿಸಿದರು.

* ದಿನಾಂಕ 01-06-2016 ಮತ್ತು 02-06-2016 ರಂದು ಧ.ರಾ.ಮ. ಸ್ಕೌಟ್ ಭವನದಲ್ಲಿ ರಾಜ್ಯ ಪುರಸ್ಕಾರ ಪರೀಕ್ಷ ಶಿಬಿರದಲ್ಲಿ ಭಾಗವಹಿಸುವ ಮಕ್ಕಳಿಗೆ ಪೂರ್ವಭಾವಿ ಪರೀಕ್ಷಾ ಶಿಬಿರವನ್ನು ಆಯೋಜಿಸಲಾಗಿತ್ತು. ಸದರಿ ಶಿಬಿರದ ಉಸ್ತುವಾರಿಯನ್ನು ಜಿಲ್ಲಾ ಸಂಘಟಕರು (ಸ್ಕೌಟ್) ಆದ ಶ್ರೀ ಟಿ.ಎಸ್. ಶಿವಣ್ಣ ವಹಿಸಿದ್ದರು. ಜಿಲ್ಲಾ ಮುಖ್ಯ ಆಯುಕ್ತರಾದ ಶ್ರೀ ಮುರುಘರಾಜೇಂದ್ರ ಜೆ. ಚಿಗಟೇರಿ, ಜಿಲ್ಲಾ ಸ್ಕೌಟ್ ಆಯುಕ್ತರಾದ ಶ್ರೀ ಎ.ಪಿ. ಷಡಾಕ್ಷರಪ್ಪ, ಜಿಲ್ಲಾ ಗೈಡ್ ಆಯುಕ್ತರಾದ ಶ್ರೀಮತಿ ಪುಟ್ಟಮ್ಮ ಮಹಾರುದ್ರಯ್ಯ ಉಪಸ್ಥಿತರಿದ್ದರು.

* ದಿನಾಂಕ 04-06-2016 ರಂದು ಧ.ರಾ.ಮ. ಸ್ಕೌಟ್ ಭವನದಲ್ಲಿ ಸ್ಥಳೀಯ ಸಂಸ್ಥೆ ಕಾರ್ಯದರ್ಶಿಗಳ ಸಭೆಯನ್ನು ಕರೆಯಲಾಗಿತ್ತು. ಜಿಲ್ಲಾ ಗೈಡ್ ಆಯುಕ್ತರಾದ ಶ್ರೀಮತಿ ಪುಟ್ಟಮ್ಮ ಮಹಾರುದ್ರಯ್ಯ ಇವರ ಅಧ್ಯಕ್ಷತೆಯಲ್ಲಿ ಸಭೆ ನಡೆಯಿತು. ಜಿಲ್ಲಾ ಮುಖ್ಯ ಆಯುಕ್ತರಾದ ಶ್ರೀ ಮುರುಘರಾಜೇಂದ್ರ ಜೆ. ಚಿಗಟೇರಿ, ಜಿಲ್ಲಾ ಕಾರ್ಯದರ್ಶಿಗಳಾದ ಶ್ರೀ ಎಸ್. ಶಂಕರ್ ನಾಯ್ಕ್, ಜಿಲ್ಲಾ ತರಬೇತಿ ಆಯುಕ್ತರಾದ ಶ್ರೀ ನೂರುಲ್ಲಾ, ಜಿಲ್ಲಾ ಜಂಟಿ ಕಾರ್ಯದರ್ಶಿಗಳಾದ ಶ್ರೀಮತಿ ಆರ್. ಸುಖವಾಣಿ, ಜಿಲ್ಲಾ ಸಂಘಟಕರುಗಳಾದ ಶ್ರೀ ಟಿ.ಎಸ್. ಶಿವಣ್ಣ, ಕು. ಪ್ರಿಯಾಂಕ ಇವರು ಉಪಸ್ಥಿತರಿದ್ದರು.

* ದಿನಾಂಕ 05-06-2016 ರಂದು ವಿಶ್ವ ಪರಿಸರ ದಿನಾಚರಣೆಯನ್ನು ಭಾರತ್ ಸ್ಕೌಟ್ಸ್-ಗೈಡ್ಸ್ ಜಿಲ್ಲಾ ಸಂಸ್ಥೆ ದಾವಣಗೆರೆ ಮತ್ತು ಚಿಗಟೇರಿ ಜಿಲ್ಲಾ ಆಸ್ಪತ್ರೆ ಜಂಟಿಯಾಗಿ ಜಿಲ್ಲಾ ಆಸ್ಪತ್ರೆ ಆವರಣವನ್ನು ಸ್ವಚ್ಛಗೊಳಿಸುವ ಮೂಲಕ ಆಚರಿಸಲಾಯಿತು. ಈ ಸಂದರ್ಭದಲ್ಲಿ ಚಿಗಟೇರಿ ಜಿಲ್ಲಾ ಆಸ್ಪತ್ರೆ ಅಧೀಕ್ಷಕರಾದ ಡಾ॥ ನೀಲಾಂಬಿಕ, ಆರ್.ಎಂ.ಓ., ಡಾ॥ ರಾಘವೇಂದ್ರ, ಜಿಲ್ಲಾ ಸ್ಕೌಟ್ ಆಯುಕ್ತರಾದ ಶ್ರೀ ಎ.ಪಿ. ಷಡಾಕ್ಷರಪ್ಪ, ಜಿಲ್ಲಾ ಗೈಡ್ ಆಯುಕ್ತರಾದ ಶ್ರೀಮತಿ ಪುಟ್ಟಮ್ಮ ಮಹಾರುದ್ರಯ್ಯ, ಇತರ ಜಿಲ್ಲಾ ಪದಾಧಿಕಾರಿಗಳು ಹಾಗೂ ವಿವಿಧ ಶಾಲೆಯ ಸ್ಕೌಟರ್ಸ್ ಮತ್ತು ಗೈಡರ್ಸ್‌ಗಳು ಭಾಗವಹಿಸಿದ್ದರು.

* ದಿನಾಂಕ 05-06-2016 ರಂದು ಸೌರಶಕ್ತಿಯ ಪದಕ ಗಳಿಸಲು ಜೈನ್ ವಿದ್ಯಾಶಾಲೆಯ ಸ್ಕೌಟ್-ಗೈಡ್‌ಗಳಿಗೆ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಜಿಲ್ಲಾ ಸಂಸ್ಥೆಯ ಪದಕ ತರಬೇತಿ ಮತ್ತು ಪರೀಕ್ಷೆಯನ್ನು ಜಿಲ್ಲಾ ಸಂಸ್ಥೆ ಅಡಿಯಲ್ಲಿ ನಡೆಸಲಾಯಿತು. ಜಿಲ್ಲಾ ಮುಖ್ಯ ಆಯುಕ್ತರಾದ ಶ್ರೀ ಮುರುಘರಾಜೇಂದ್ರ ಜೆ. ಚಿಗಟೇರಿ ಇವರು ಸೂರ್ಯ ಕಿರಣಗಳ ಪ್ರಖರತೆ, ಸೌರಶಕ್ತಿಯ ಸಂಗ್ರಹಣೆ, ಶೇಖರಣೆ ಮತ್ತು ಉಪಯೋಗಿಸುವ ವಿವಿಧ ಮಾಹಿತಿ, ಸೌರಶಕ್ತಿಯ ಕುಕ್ಕರ್, ಸೌರಶಕ್ತಿಯ ವಿದ್ಯುತ್ ಫಲಕಗಳು ಸೌರಶಕ್ತಿ ವಾಟರ್ ಹೀಟರ್‌ನ ಮಾಹಿತಿಯನ್ನು ನೀಡಿದರು.

## ಗದಗ

ಪರಿಸರದ ತೊಟ್ಟಿಲಲ್ಲಿ ಬದುಕುತ್ತಿರುವ ಮಾನವ ಪರಿಸರದಿಂದ ಹಲವಾರು ಪ್ರಯೋಜನಗಳನ್ನು ಪಡೆಯುತ್ತಾನೆ. ಇಂತಹ ಪರಿಸರದಲ್ಲಿ ಗಿಡ-ಮರಗಳನ್ನು ಬೆಳೆಯಿಸುವುದರ ಮೂಲಕ ಪರಿಸರವನ್ನು ಸಂರಕ್ಷಣೆ ಮಾಡುವದು ನಮ್ಮೆಲ್ಲರ ಜವಾಬ್ದಾರಿಯಾಗಿದೆ ಎಂದು ಸಿ.ಆರ್.ಪಿ.ಗಳಾದ ಶ್ರೀ ಜಿ.ಬಿ.ಬಂಡಿಹಾಳವರು ಹೇಳಿದರು.

ಸರಕಾರಿ ಹಿರಿಯ ಪ್ರಾಥಮಿಕ ಬೆಳಹೊಡ ಶಾಲೆಯ ಆವರಣದಲ್ಲಿ ಸ್ಕೌಟ್ಸ್ ಮತ್ತು ಗೈಡ್ಸ್ ದಳಗಳಿಂದ ವಿಶ್ವ ಪರಿಸರ ದಿನಾಚರಣೆ ಅಂಗವಾಗಿ ಸಸಿ ನೆಡುವುದರ ಮೂಲಕ ಮತ್ತು ಶಾಲೆಯ ವಿಜ್ಞಾನ ಮತ್ತು ಗಣಿತ ಸಂಘವನ್ನು ಉದ್ಘಾಟಿಸಿ ಅದರ ಪ್ರಾಮುಖ್ಯತೆಯನ್ನು ತಿಳಿಸಿದರು.

ಕಾರ್ಯಕ್ರಮದ ಅಧ್ಯಕ್ಷತೆಯನ್ನು ವಹಿಸಿದ್ದ ಶಾಲಾ ಪ್ರಧಾನ ಗುರುಗಳಾದ ಶ್ರೀ ವ್ಹಿ.ಬಿ. ಪೋಲಿಸ್ ಪಾಟೀಲರು ಗಿಡ-ಮರಗಳನ್ನು ಬೆಳೆಸುವುದರಿಂದ ಶುದ್ಧವಾದ ಪರಿಸರವನ್ನು ಮತ್ತು ಸಮತೋಲಿತ ಮಳೆಯನ್ನು ಪಡೆಯಲು ಸಾಧ್ಯ ಮತ್ತು ವಿಜ್ಞಾನ ಮತ್ತು ಗಣಿತ ಸಂಘದ ಮೂಲಕ ವಿದ್ಯಾರ್ಥಿಗಳ ಹೆಚ್ಚಿನ ಜ್ಞಾನವನ್ನು ಪಡೆಯಬೇಕು ಎಂದು ಹೇಳಿದರು.

ಕಾರ್ಯಕ್ರಮದಲ್ಲಿ ಶ್ರೀ ಬಿ.ಎಮ್. ಸಯ್ಯದ್, ಶ್ರೀ ಎಸ್.ಎ. ಸೌದಾಗರ, ಶ್ರೀ ಎಮ್.ಎಚ್. ಉಳವಿ, ಶ್ರೀ ಎ.ಎಚ್. ದೊಡ್ಡಮನಿ, ಶ್ರಿಮತಿ ಸುಜಾತಾ ಡಿ. ಗುರುಗಳು ಉಪಸ್ಥಿತರಿದ್ದರು. ಸ್ಕೌಟ್ಸ್ ಮಾಸ್ಟರ್‌ರಾದ ಶ್ರೀ ಎಮ್.ಕೆ. ಜಕ್ಕಲಿ ನಿರೂಪಿಸಿದ ಕಾರ್ಯಕ್ರಮದಲ್ಲಿ ಶ್ರಿಮತಿ ಆರ್.ಎಮ್. ಬೆಲ್ಲದವರು ಸ್ವಾಗತಿಸಿದರು ಮತ್ತು ಶ್ರೀಮತಿ ಆರ್. ಆರ್. ನಿಲಗುಂದ ವಂದಿಸಿದರು.

## ಹಾವೇರಿ

ದಿನಾಂಕ : 21-06-2016 ರಂದು ಭಾರತ್ ಸ್ಕೌಟ್ಸ್-ಗೈಡ್ಸ್ ಜಿಲ್ಲಾ ಸಂಸ್ಥೆ ಹಾವೇರಿ ಸರ್ಕಾರಿ ಕನ್ನಡ ಪ್ರೌಢಶಾಲೆ, ಸರ್ಕಾರಿ ಪ್ರೌಢಶಾಲೆ, ಸರ್ಕಾರಿ ಮಾದರಿ ಪ್ರಾಥಮಿಕ ಶಾಲೆ-ನಂ 2 ಹಾವೇರಿ ಇವರ ಸಂಯುಕ್ತ ಆಶ್ರಯದಲ್ಲಿ, ಶಾಲಾ ಆವರಣದಲ್ಲಿ ಯೋಗ ದಿನಾಚರಣೆಯನ್ನು ಆಚರಿಸಲಾಯಿತು. ಈ ಶಾಲೆಯ 250 ಸ್ಕೌಟ್ಸ್-ಗೈಡ್ಸ್‌ಗಳು ಕಾರ್ಯಕ್ರಮದಲ್ಲಿ ಭಾಗವಹಿಸಿದ್ದರು.ಯೋಗ ತರಬೇತಿದಾರರಾದ ಶ್ರೀ ಸುಂದರ ಕುಲಕರ್ಣಿ ಸ್ಕೌಟ್ಸ್-ಗೈಡ್ಸ್‌ಗಳಿಗೆ ಯೋಗಾಸನದ ಮಹತ್ವ ತಿಳಿಸುತ್ತಾ ಯೋಗಾಸನ ಮಾಡಿಸಿದರು. ಹಾಗೂ ಶ್ರೀ ಇಸ್ಮಾಯಿಲ್ ಬುಡಂದಿ ಇವರು ಸಾಥ್ ನೀಡಿದರು. ಶ್ರೀಮತಿ ಮಾಧುರಿ ದೇವದರ, ಶ್ರೀ ರವಿ ಹಿಂಚಿಗೇರಿ ಆಜೀವ ಸದಸ್ಯರು ಸರಕಾರಿ ಪ್ರೌಢಶಾಲೆಯ ಪ್ರಭಾರಿ ಮುಖ್ಯೋಪಾಧ್ಯಾಯರಾದ ಶ್ರೀ ಹೊಟ್ಟೇಗೌಡ್ರ, ಶ್ರಿ ಎಮ್. ಎನ್. ಕರ್ಜಗಿ, ಮುಖ್ಯೋಪಾಧ್ಯಾಯರು ಎಮ್.ಪಿ.ಎಸ್. ನಂ. 2 ಹಾವೇರಿ ಶ್ರೀ ಆರ್ ಆರ್. ಕಾಶಪ್ಪನವರ ಜಿಲ್ಲಾ ಕಾರ್ಯದರ್ಶಿ ಭಾಗವಹಿಸಿದ್ದರು. ಶ್ರೀ ಎ.ಎಲ್. ಶೇಖಸೂರಣಗಿ, ಜಿಲ್ಲಾ ಸಂಘಟಿಕರು (ಸ್ಕೌಟ್ಸ್) ರವರು ಕಾರ್ಯಕ್ರಮವನ್ನು ಸಂಘಟನೆ ಮಾಡಿದ್ದರು.

## ಕಲಬುರಗಿ

ದಿನಾಂಕ : 05-06-2016 ರಂದು ಭಾರತ್ ಸ್ಕೌಟ್ಸ್-ಗೈಡ್ಸ್ ಕಾರ್ಯಾಲಯ ಆವರಣದಲ್ಲಿ ಸಸಿ ನೆಡುವುದರ ಮೂಲಕ ವಿಶ್ವ ಪರಿಸರ ದಿನಾಚರಣೆಯನ್ನು ಆಚರಿಸಲಾಯಿತು. ಈ ಕಾರ್ಯಕ್ರಮದಲ್ಲಿ ಮುಖ್ಯ ಅತಿಥಿಗಳಾಗಿ ಆಗಮಿಸಿದ್ದ ಶ್ರೀಮತಿ ನೀತಾ-ಪುರೋಹಿತ, ಪ್ರಾಚಾರ್ಯರು ಕೇಂಬ್ರಿಡ್ಜ್ ಆಂಗ್ಲ ಮಾಧ್ಯಮ ಶಾಲೆ ಕಲಬುರಗಿ. ಅವರು ಮಾತನಾಡುತ್ತಾ ಪರಿಸರ ರಕ್ಷಣೆ ನಮ್ಮೆಲ್ಲರ ಹೊಣೆ. ಮುಂದಿನ ಪೀಳಿಗೆಯವರಿಗೆ ಪರಿಸರ ಉಳಿಯಬೇಕು. ಪ್ರತಿಯೊಬ್ಬ ಸ್ಕೌಟ್ಸ್-ಗೈಡ್ಸ್ ಕನಿಷ್ಠ ಒಂದು ಮರವನ್ನಾದರೂ ರಕ್ಷಿಸಬೇಕು. ನೀರು, ಗೊಬ್ಬರ ಅದಕ್ಕೆ ಒದಗಿಸಿ ರಕ್ಷಣೆ ನೀಡಲು ಕರೆ ನೀಡಿದರು.

ಕಾರ್ಯಕ್ರಮದ ಅಧ್ಯಕ್ಷತೆಯನ್ನು ವಹಿಸಿದ್ದ ಶ್ರೀ ಎಸ್.ಪಿ. ಸುಳ್ಯದ್ ಜಿಲ್ಲಾ ಆಯುಕ್ತರು(ಸ್ಕೌ) ಅವರು ಮಾತನಾಡುತ್ತ. ವನಮಹೋತ್ಸವ ಕಾರ್ಯಕ್ರಮವೇ ಈಗ ವಿಶ್ವ ಪರಿಸರ ದಿನವಾಗಿದೆ. ನಿಸರ್ಗವು ನಮಗೆ ಏನೆಲ್ಲಾ ನೀಡಿದೆ. ಹಸಿರು ಮರಗಳ ಸಂಖ್ಯೆ ಕಡಿಮೆಯಾಗುತ್ತಿದೆ ಎಂದರು. ಶ್ರೀ ವೀರಭದ್ರಯ್ಯ ಸ್ವಾಗತ ಕೋರಿದರು. ಸ್ಕೌಟ್ಸ್ ಮಾಸ್ಟರ್‌ಗಳಾದ ಶ್ರೀ

ವೀರಪ್ಪ ಹೆಚ್. ಶ್ರೀಜಯಪ್ರಕಾಶ್ ಕಟ್ಟಿಮನಿ. ಶ್ರೀ ಸಂತೋಷ್ ಗುತ್ತೇದಾರ, ಶ್ರೀ ಉದಯಕುಮಾರ, ಗೈಡ್ ಕ್ಯಾಪ್ಟನ್ ಗಳಾದ ಶ್ರೀಮತಿ ಸೀಮಾವತಿ ಭಟ್, ಶ್ರೀಮತಿ ಗಿರಿಜಾ, ಶ್ರೀಮತಿ ರಾಜೇಶ್ವರಿ, ಸ್ಕೌಟ್-ಗೈಡ್, ಕಬ್ಸ್-ಬುಲ್‌ಬುಲ್ಸ್‌ಗಳು ಭಾಗವಹಿಸಿದ್ದರು. ಶ್ರೀ ಗುರುನಾಥ ಕಾಳೆ ಅವರು ವಂದನಾರ್ಪಣೆ ಮಾಡಿದರು.

## ಕೋಲಾರ

ದಿನಾಂಕ : 05-06-2016 ರಂದು ಕೋಲಾರದಲ್ಲಿ ವಿಶ್ವ ಪರಿಸರ ದಿನಾಚರಣೆಯನ್ನು ಜಿಲ್ಲಾ ಸ್ಕೌಟ್ಸ್ ಮತ್ತು ಗೈಡ್ಸ್ ಸಂಸ್ಥೆ, ಕೋಲಾರ ಜಿಲ್ಲಾಡಳಿತ, ಅರಣ್ಯ ಇಲಾಖೆ ಮತ್ತು ಧರ್ಮಸ್ಥಳ ಸೇವಾ ಸಂಸ್ಥೆಗಳ ಸಂಯುಕ್ತ ಆಶ್ರಯದಲ್ಲಿ ನಡೆಸಲಾಯಿತು. ಜಿಲ್ಲಾಧಿಕಾರಿಗಳಾದ ಡಾ॥ ತ್ರಿಲೋಕ್ ಚಂದ್ರ ರವರು ಸ್ಕೌಟ್ಸ್-ಗೈಡ್ಸ್‌ಗಳ ಜಾಥಾಕ್ಕೆ ಹಸಿರು ನಿಶಾನೆ ತೋರುವ ಮೂಲಕ ಚಾಲನೆ ನೀಡಿ, ವಿದ್ಯಾರ್ಥಿಗಳು ತಮ್ಮ ಶಿಕ್ಷಣದ ಜೊತೆಗೆ ಪರಿಸರ ಕಾಳಜಿಯನ್ನು ವಹಿಸಿಕೊಂಡು ಪರಿಸರ ಸಂರಕ್ಷಣೆಗೆ ಕೈ ಜೋಡಿಸಿದಾಗ ಮಾತ್ರ ನಾವು ಆರೋಗ್ಯವಾಗಿರಲು ಸಾಧ್ಯ ಎಂದರು.

ಜಿಲ್ಲಾ ವಲಯ ಅರಣ್ಯಾಧಿಕಾರಿಗಳಾದ ಶ್ರೀ ರಾಮಲಿಂಗೇಗೌಡರು ಮಾತನಾಡಿ ಪರಿಸರ ಸಂರಕ್ಷಣೆಗೆ ಸ್ಕೌಟ್ಸ್-ಗೈಡ್ಸ್ ಸಂಸ್ಥೆಯ ಸದಸ್ಯರು ಹಾಗು ಪದಾಧಿಕಾರಿಗಳು ಕೈ ಜೋಡಿಸಿ ಸಮಾಜದಲ್ಲಿ ಹಸಿರು ವಾತಾವರಣ ನಿರ್ಮಾಣಕ್ಕೆ ಸಹಕರಿಸುತ್ತಿರುವುದು ಅಭಿನಂದನಾರ್ಹ, ಇದೇ ರೀತಿಯ ಸಹಕಾರ ಸದಾ ಸಿಗಲಿ ಎಂದು ಆಶಿಸಿದರು.

ಸಾಮಾಜಿಕ ವಲಯ ಅರಣ್ಯ ಸಂರಕ್ಷಣಾಧಿಕಾರಿಗಳಾದ ಶ್ರೀ ಶ್ರೀನಿವಾಸರಾವ್ ರವರು ಮಾತನಾಡಿ ಪರಿಸರ ಸಂರಕ್ಷಣೆಗೆ ಸಮಾಜದ ಪ್ರತಿಯೊಬ್ಬರು ಕಾಳಜಿ ವಹಿಸಿ ತಮ್ಮ ಮನೆಗಳ ಹತ್ತಿರ, ಸರ್ಕಾರಿ ಜಾಗ ಹಾಗು ತೋಟಗಳ ಬದುಗಳಲ್ಲಿ ಗಿಡ ನೆಟ್ಟು ಪೋಷಿಸಿದಾಗ ಮಾತ್ರ ನಾವು ಉತ್ತಮ ಗಾಳಿ, ಮಳೆ ಪಡೆಯಲು ಸಾಧ್ಯ ಆದ್ದರಿಂದ ವಿದ್ಯಾರ್ಥಿಗಳು ತಮ್ಮ ಸುತ್ತ-ಮುತ್ತಲಿನ ಪರಿಸರದ ಬಗ್ಗೆ ಜನರಿಗೆ ಅರಿವು ಮೂಡಿಸಬೇಕಾಗಿದೆ ಎಂದರು.

ನಗರದ ಪ್ರಮುಖ ಬೀದಿಗಳಲ್ಲಿ ಸ್ಕೌಟ್ಸ್-ಗೈಡ್ಸ್, ರೋವರ್ಸ್-ರೇಂಜರ್ಸ್‌ಗಳು ಪರಿಸರ ಜಾಗೃತಿಯ ಸಂದೇಶಗಳನ್ನು ಭಿತ್ತಿಫಲಕಗಳನ್ನು ಹಿಡಿದು ಘೋಷಣೆಗಳನ್ನು ಕೂಗುತ್ತಾ ಸಾಗಿ, ನಗರದ ಬಸ್ ನಿಲ್ದಾಣದಲ್ಲಿ, ಆಲ್ ಅಮೀನ್ ಕಾಲೇಜಿನ ಆವರಣದಲ್ಲಿ ಅಂತರಗಂಗೆ ಬೆಟ್ಟದ ಹೊಸಹಳ್ಳಿ ಗ್ರಾಮದ ಸಮೀಪದ ಗುಡ್ಡದಲ್ಲಿ ಸಸಿಗಳನ್ನು ನೆಟ್ಟು 15 ಕೆ.ಜಿ. ಬೀಜಗಳನ್ನು ನಾಟಿ ಮಾಡಲಾಯಿತು. ಈ ಸಂದರ್ಭದಲ್ಲಿ ಜಿಲ್ಲಾ ಯುವ ಸಮಿತಿ ಪದಾಧಿಕಾರಿಗಳು, ಸ್ಕೌಟ್ಸ್-ಗೈಡ್ಸ್, ರೋವರ್ಸ್-ರೇಂಜರ್ಸ್‌ಗಳು ಭಾಗವಹಿಸಿದ್ದರು.

* ದಿನಾಂಕ 06-06-2015 ರಂದು ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆ ಮಾವಳ್ಳಿ ಶಾಲಾ ಆವರಣದಲ್ಲಿ ಗಿಡ ನೆಡುವ ಕಾರ್ಯಕ್ಕೆ ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿಗಳಾದ ಶ್ರೀ ಮೋಹನ್ ಕುಮಾರ್ ರವರು ಚಾಲನೆ ನೀಡಿದರು. ಈ ಶಾಲಾ ಆವರಣದಲ್ಲಿ ಸುಮಾರು 115 ಗಿಡಗಳನ್ನು ನೆಡಲಾಯಿತು. ಈ ಸಂದರ್ಭದಲ್ಲಿ ಜಿಲ್ಲಾ ಪದಾಧಿಕಾರಿಗಳು, ಶಾಲಾ ಅಧ್ಯಕ್ಷರಾದ ಶ್ರೀ ರಜನಿ ಕುಮಾರ್, ಸ್ಕೌಟ್ ಮಾಸ್ಟರ್ ವೆಂಕಟಾಚಲಪತಿ, ಶಾಲಾ ಸಿಬ್ಬಂದಿ ಹಾಗು ಮಕ್ಕಳು ಉಪಸ್ಥಿತರಿದ್ದರು.

**The Nature of**
**YOGA**
**is to Shine the Light of**
**Awareness**
**into the darkest Corners of the Body**

## ಮಂಡ್ಯ



ದಿನಾಂಕ: 18 ರಿಂದ 19 ಮೇ 2016 ರ ವರೆಗೆ ಮಂಡ್ಯ ಜಿಲ್ಲಾ ಸಂಸ್ಥೆ ಆಶ್ರಯದಲ್ಲಿ ರಾಜ್ಯ ಪುರಸ್ಕಾರ ಪರೀಕ್ಷಾ ಶಿಬಿರದ ಪೂರ್ವ ಸಿದ್ಧತಾ ತರಬೇತಿ ಕಾರ್ಯಾಗಾರವನ್ನು ಹಮ್ಮಿಕೊಳ್ಳಲಾಗಿತ್ತು. ಗೈಡ್ ವಿಭಾಗಕ್ಕೆ ಶ್ರೀಮತಿ ಜಯಲಕ್ಷ್ಮಿಗೌಡ, ಸ್ಕೌಟ್ ವಿಭಾಗಕ್ಕೆ ಶ್ರೀ ಸಾಮ್ಯುಯಲ್ ಸತ್ಯಕುಮಾರ್ ಅವರು ನಾಯಕರಾಗಿದ್ದರು. ಶ್ರೀಎನ್. ಕೃಷ್ಣಮೂರ್ತಿ ಜಿಲ್ಲಾ ಸಂಘಟನಾ ಆಯುಕ್ತರು ಮಾರ್ಗದರ್ಶನ ನೀಡಿದರು. ಕಾರ್ಯಕ್ರಮದಲ್ಲಿ ಜಿಲ್ಲಾ ಸಂಘಟಕರಾದ ಶ್ರೀ ಬಿ.ಎಂ. ಲೋಕೇಶ, ಶ್ರೀ ರವಿಶಂಕರ್, ಶ್ರೀಮತಿ ಕೆ.ಎಂ. ನಾಗರತ್ನ ಮಕ್ಕಳಿಗೆ ಮಾರ್ಗದರ್ಶನ ನೀಡಿದರು. ಜಿಲ್ಲಾ ಕಾರ್ಯದರ್ಶಿ ಶ್ರೀ ಶಿವರಾಮೇಗೌಡ ಕಾರ್ಯಕ್ರಮ ಆಯೋಜಿಸಿದ್ದರು.

* ಪಟ್ಟಣದ ಲೆನಿನ್ ಆಂಗ್ಲ ಮಾಧ್ಯಮ ಶಾಲೆಯ ಸ್ಕೌಟ್ ಮತ್ತು ಗೈಡ್‌ಗಳು ಕೋಟೆಯ ಪಕ್ಕದಲ್ಲಿ ಹೆಬ್ಬೇವು, ಹೊಂಗೆ, ಹಿಪ್ಪೆ,ನೇರಳೆ ಇತರ ಸಸಿಗಳನ್ನು ನೆಟ್ಟು ನೀರೆರೆದು. ಇಲ್ಲಿನ ಜಾಮಿಯಾ ಮಸೀದಿ ರಸ್ತೆಯ ಉದ್ದಕ್ಕೂ ಬಗೆ ಬಗೆಯ ಗಿಡಗಳನ್ನು ನೆಡಲಾಯಿತು. ಕೋಟೆ ಮತ್ತು ಬುರುಜುಗಳ ಸಮೀಪ ಸಸಿಗಳನ್ನು ನೆಡಲಾಯಿತು.ಇದಕ್ಕೂ ಮುನ್ನ ಶಾಲೆಯಿಂದ ಖಾಸಗಿ ಬಸ್ ನಿಲ್ದಾಣದ ವರೆಗೆ ಪರಿಸರ ಜಾಗೃತಿ ಜಾಥಾ ನಡೆಸಿದರು. ಪರಿಸರ ಉಳಿಸುವ ಸಂದೇಶ ಸಾರುವ ಫಲಕಗಳನ್ನು ಹಿಡಿದು ಸಾಲು ಸಾಲು ಘೋಷಣೆಗಳನ್ನು ಕೂಗಿದರು.

ನಮ್ಮ ಶಾಲೆಯ ಸ್ಕೌಟ್-ಗೈಡ್‌ಗಳು ಮುಂಗಾರು ಮಳೆ ಶುರುವಾಗುವ ಸಂದರ್ಭದಲ್ಲಿ ಪ್ರತಿವರ್ಷ ಗಿಡ ನೆಡುತ್ತಾರೆ. ಹೀಗೆ ನೆಡುವ ಗಿಡಗಳಿಗೆ ವಾರದಲ್ಲಿ ಎರಡು ದಿನ ನೀರುಣಿಸಿ ಪೋಷಣೆ ಮಾಡುತ್ತಾರೆ. ಅಗತ್ಯ ಬಿದ್ದರೆ ಗಿಡಗಳಿಗೆ, ಮುಳ್ಳಿನ ಬೇಲಿ ನಿರ್ಮಿಸಲಾಗುತ್ತದೆ ಎಂದು ಶಾಲೆಯ ಪ್ರಾಂಶುಪಾಲ ಡಾ.ಬಿ.ಎನ್. ಪದ್ಮನಾಭ ತಿಳಿಸಿದರು. ಶ್ರೀಮತಿ ಶುಭವತಿ, ಶ್ರೀ ರಾಜಶೇಖರ್ ಇತರರು ಭಾಗವಹಿಸಿದ್ದರು.

## ರಾಯಚೂರು

ದಿನಾಂಕ : 05-06-2016 ರಂದು ಭಾರತ್ ಸ್ಕೌಟ್ಸ್-ಗೈಡ್ಸ್ ಜಿಲ್ಲಾ ಸಂಸ್ಥೆ ವತಿಯಿಂದ ನಗರದ ಬಸವಶ್ರೀ ಶಾಲೆಯಲ್ಲಿ ಸಸಿ ನೆಡುವುದರ ಮೂಲಕ ವಿಶ್ವ ಪರಿಸರ ದಿನವನ್ನು ಆಚರಿಸಲಾಯಿತು. ಮುಖ್ಯ ಅತಿಥಿಗಳಾದ ಶ್ರೀಮತಿ ಆಲೀಯಾ ಖಾನಂ ಜಿಲ್ಲಾ ಖಜಾಂಚಿಗಳು ಭಾ.ಸ್ಕೌ-ಗೈ. ಸಂಸ್ಥೆ ಇವರು ಮಾತನಾಡಿ ಮನೆಗೊಂದು ಮರ ಊರಿಗೊಂದು ವನ ಎಂಬ ನುಡಿಯಂತೆ ನಾವೆಲ್ಲರು ಹೆಚ್ಚಿನ ಮರಗಳನ್ನು ಬೆಳೆಸೋಣ, ಮರಕಡಿಯುವುದನ್ನು ತಡೆಯೋಣ, ಒಂದು ವೇಳೆ ಮರಕಡಿದರೆ ಆ ಜಾಗದಲ್ಲಿ ಕನಿಷ್ಠ ಮೂರು ಸಸಿಗಳನ್ನಾದರು ನೆಡೋಣ ಎಂದು ಮಕ್ಕಳಲ್ಲಿ ಜಾಗೃತಿ ಮೂಡಿಸಿದರು. ಶ್ರೀರಾವುತ್‌ರಾವ್ ಬರೂರು ಜಿಲ್ಲಾ ಸಂಘಟನಾ ಆಯುಕ್ತರು, ಸಸಿ ನೆಡುವುದು ಅಷ್ಟೇ ಅಲ್ಲ ಅದರ ಸುತ್ತಮುತ್ತಲಿನ ಪರಿಸರವನ್ನು ಸ್ವಚ್ಚವಾಗಿಡಬೇಕು, ಪ್ಲಾಸ್ಟಿಕ್ ಬಳಕೆಯನ್ನು ಕಡಿಮೆ ಮಾಡಿ, ಜಾಗತಿಕ ತಾಪಮಾನವನ್ನು ತಡೆಗಟ್ಟಲು ಹೆಚ್ಚಿನ ಮರಗಳನ್ನು ಬೆಳೆಸಿ ಎಂದರು.

ಕಾರ್ಯಕ್ರಮದ ಅಧ್ಯಕ್ಷತೆ ವಹಿಸಿ ಮಾತನಾಡಿದ, ಶ್ರೀಮತಿ ಲಲಿತಾ ಎಂ, ಮುಖ್ಯೋಪಾಧ್ಯಾಯರು ಬಸವಶ್ರೀ ಶಾಲೆ ಇವರು ಮಕ್ಕಳ ಉತ್ತಮ ಶಿಕ್ಷಣಕ್ಕೆ ಉತ್ತಮವಾದ ಪರಿಸರ ಅಗತ್ಯ. ಅಂತಹ ಪರಿಸರವನ್ನು ನಿರ್ಮಾಣ ಮಾಡುವಲ್ಲಿ ಸ್ಕೌಟ್ಸ್-ಗೈಡ್ಸ್‌ಗಳ ಪಾತ್ರ ಬಹುಮುಖ್ಯವಾದದ್ದು, ಆ ನಿಟ್ಟಿನಲ್ಲಿ ಪರಿಸರವನ್ನು ಸಂರಕ್ಷಣೆ ಮಾಡುವುದು ನಮ್ಮೆಲ್ಲರ ಆದ್ಯ ಕರ್ತವ್ಯ. ಇದಕ್ಕೂ ನೀವೆಲ್ಲರು ಜನಜಾಗೃತಿ ಮೂಡಿಸಬೇಕೆಂದು ಕಿವಿಮಾತು ಹೇಳಿದರು. ಈ ಸಮಾರಂಭದಲ್ಲಿ ಶಾಲೆಯ ಸ್ಕೌಟ್ಸ್-ಗೈಡ್ಸ್‌ಗಳು ಭಾಗವಹಿಸಿ ಶಾಲಾ ಆವರಣದಲ್ಲಿ ಸಸಿಗಳನ್ನು ನೆಟ್ಟರು. ಈ ಸಂದರ್ಭದಲ್ಲಿ ಶಾಲಾ ವಿದ್ಯಾರ್ಥಿಗಳು ಹಾಗು ಶಿಕ್ಷಕ ವೃಂದದವರು ಭಾಗವಹಿಸಿದ್ದರು. ಶ್ರೀಮತಿ ನಿರ್ಮಲಾ, ಶಿಕ್ಷಕಿ ಎಲ್ಲರನ್ನು ಸ್ವಾಗತಿಸಿದರು. ಶ್ರೀ ವಿಶ್ವನಾಥ ಗೌಡ ಜಿಲ್ಲಾ ಸಂಘಟಕರು ಇವರು ಕಾರ್ಯಕ್ರಮವನ್ನು ನಿರೂಪಿಸಿ ವಂದಿಸಿದರು.



## ಶಿವಮೊಗ್ಗ

ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಜಿಲ್ಲಾ ಸಂಸ್ಥೆ ಹಾಗು ಶಿವಮೊಗ್ಗ ಸ್ಥಳೀಯ ಸಂಸ್ಥೆ ಸಂಯುಕ್ತಾಶ್ರಯದಲ್ಲಿ ಜಿಲ್ಲಾ ಸ್ಕೌಟ್ ಭವನದಲ್ಲಿ ಅಂತರಾಷ್ಟ್ರೀಯ ಯೋಗ ದಿನಾಚರಣೆಯನ್ನು ನಡೆಸಲಾಯಿತು. ಈ ಕಾರ್ಯಕ್ರಮದಲ್ಲಿ ಒಟ್ಟು 125 ಸ್ಕೌಟ್ಸ್-ಗೈಡ್ಸ್, ರೋವರ್ಸ್-ರೇಂಜರ್ಸ್, ಸ್ಕೌಟ್ ಮಾಸ್ಟರ್ಸ್-ಗೈಡ್ ಕ್ಯಾಪ್ಟನ್‌ಗಳು ಹಾಜರಿದ್ದರು. ಶ್ರೀಮತಿ ವಿಜಯಲಕ್ಷ್ಮಿ ಎಸ್.ಆರ್. ಜಿಲ್ಲಾ ಗೈಡ್ ಆಯುಕ್ತರವರು ಸ್ವಾಗತಿಸಿದರು. ಜಿಲ್ಲಾ ಮುಖ್ಯ ಆಯುಕ್ತರಾದ ಶ್ರೀ ಹೆಚ್.ಡಿ. ರಮೇಶಶಾಸ್ತ್ರಿ ರವರು ದೀಪ ಬೆಳಗಿಸುವುದರ ಮೂಲಕ ಉದ್ಘಾಟಿಸಿದರು. ಯೋಗದ ಮಹತ್ವದ ಬಗ್ಗೆ ಯೋಗ ಗುರುಗಳಾದ ಶ್ರೀ ಅರವಿಂದ ಜಿ. ರವರು ಸವಿಸ್ತಾರವಾಗಿ ಮಾಹಿತಿ ನೀಡಿದರು. ಜಿಲ್ಲಾ ಖಜಾಂಚಿಗಳಾದ ಶ್ರೀ ಹೆಚ್. ಪರಮೇಶ್ವರ ರವರು ಯೋಗದಿಂದ ತಮಗೆ ಆದ ಲಾಭದ ಬಗ್ಗೆ ವಿವರಿಸಿದರು. ಜಿಲ್ಲಾ ಮುಖ್ಯ ಆಯುಕ್ತರಾದ ಶ್ರಿ ಹೆಚ್.ಡಿ. ರಮೇಶ ಶಾಸ್ತ್ರಿರವರು ಮಾತನಾಡಿ ನಾನು ಕ್ರೀಡಾಪಟುವಾಗಿದ್ದೆ, ನೀವೆಲ್ಲರೂ ಪ್ರತಿದಿನ ಯೋಗ ಮಾಡಿ ಆರೋಗ್ಯವನ್ನು ಕಾಪಾಡಿಕೊಳ್ಳಿ ಎಂದು ಕರೆ ನೀಡಿದರು. ಜಿಲ್ಲಾ ಕಾರ್ಯದರ್ಶಿ ಶ್ರೀ ಕೆ.ಪಿ. ಬಿಂದುಕುಮಾರ ರವರು ವಂದಿಸಿದರು. ಸಭಾ ಕಾರ್ಯಕ್ರಮವನ್ನು ಶ್ರೀ ಎ.ವಿ. ರಾಜೇಶ, ಜಿಲ್ಲಾ ತರಬೇತಿ ಆಯುಕ್ತರು (ಸ್ಕೌಟ್) ರವರು ನಿರ್ವಹಿಸಿದರು. ಸಭಾ ಕಾರ್ಯಕ್ರಮದ ಬಳಿಕ ಯೋಗ ಗುರುಗಳಾದ ಶ್ರೀ ಅರವಿಂದ ರವರು ಆಸನಗಳನ್ನು ಪ್ರಯಾಗಿಕವಾಗಿ ಮಾಡಿಸಿ ಅದರ ಲಾಭ ತಿಳಿಸಿದರು.

## ಉಡುಪಿ



ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಜಿಲ್ಲಾ ಸಂಸ್ಥೆ ವತಿಯಿಂದ ವಿಶ್ವ ಪರಿಸರ ದಿನಾಚರಣೆಯುನ್ನು ಡಾ॥ ವಿ.ಎಸ್. ಆಚಾರ್ಯ ಭಾರತ್ ಸ್ಕೌಟ್ಸ್-ಗೈಡ್ಸ್ ಜಿಲ್ಲಾ ತರಬೇತಿ ಕೇಂದ್ರದಲ್ಲಿ ಪ್ರಗತಿನಗರ ಅಲೆವೂರು ಇಲ್ಲಿ ಆಚರಿಸಲಾಯಿತು. ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಜಿಲ್ಲಾ ಸಂಸ್ಥೆಯ ಉಪಾಧ್ಯಕ್ಷರಾದ ಶ್ರೀಮತಿ ಜ್ಯೋತಿ ಜೆ. ಪೈ. ಯವರು ಗಿಡ ನೆಡವು ಮೂಲಕ ಕಾರ್ಯಕ್ರಮಕ್ಕೆ ಚಾಲನೆ ನೀಡಿ ಸಂದೇಶ ನೀಡಿದರು. ಜಿಲ್ಲಾ ಮುಖ್ಯ ಆಯುಕ್ತರಾದ ಶ್ರೀ ಕೆ.ಬಿ. ರಾವ್ ವಿಶ್ವ ಪರಿಸರ ದಿನಾಚರಣೆಯ ದಿನದ ಮಹತ್ವವನ್ನು ತಿಳಿಸಿದರು. ಜಿಲ್ಲಾ ಸಹ ಆಯುಕ್ತರಾದ ಶ್ರೀ ಕೆ. ಜಯಚಂದ್ರ ಎಲ್ಲರನ್ನೂ ಸ್ವಾಗತಿಸಿದರು. ಕಾರ್ಯಕ್ರಮದಲ್ಲಿ ಜಿಲ್ಲಾ ಗೈಡ್ ಆಯುಕ್ತೆ ಶ್ರೀಮತಿ ರಾಜಲಕ್ಷ್ಮೀ ಶೆಟ್ಟಿ, ಪ್ರೊ. ದಯಾನಂದ ಶೆಟ್ಟಿ, ಹಿರಿಯಡಕ ಪಿ.ಯೂ ಕಾಲೇಜಿನ ರೋವರ್ ಲೀಡರ್ ಶ್ರೀ ಮಂಜುನಾಥ, ಮಿಲಾಗ್ರಿಸ್ ಪಿ.ಯೂ. ಕಾಲೇಜಿನ ರೇಂಜರ್ ಲೀಡರ್ ಶ್ರೀಮತಿ ರಾಧ ಫ್ಲೋರೀನಾ, ವಿವಿಧ ಶಾಲಾ ಕಾಲೇಜಿನ ಸುಮಾರು 50 ಸ್ಕೌಟ್ಸ್-ಗೈಡ್ಸ್, ರೋವರ್-ರೇಂಜರ್‌ಗಳು ಈ ಕಾರ್ಯಕ್ರಮದಲ್ಲಿ ಭಾಗವಹಿಸಿದ್ದರು. ಶ್ರೀ ನಿತಿನ್ ಅಮೀನ್, ಶ್ರೀಮತಿ ಸುಮನ ಶೇಖರ್ ಕಾರ್ಯಕ್ರಮವನ್ನು ಸಂಘಟಿಸಿದರು.

* ದಿನಾಂಕ : 06 ರಿಂದ 08 ಜೂನ್ 2016 ರ ವರೆಗೆ ಭಾರತ್ ಸ್ಕೌಟ್ಸ್-ಗೈಡ್ಸ್ ಜಿಲ್ಲಾ ಸಂಸ್ಥೆ ಉಡುಪಿ ಇದರ ಜಿಲ್ಲಾ ಮಟ್ಟದ ತೃತೀಯ ಸೋಪಾನ ಪರೀಕ್ಷಾ ಶಿಬಿರವು ಡಾ॥ ವಿ.ಎಸ್. ಆಚಾರ್ಯ ಸ್ಕೌಟ್ಸ್-ಗೈಡ್ಸ್ ಜಿಲ್ಲಾ ತರಬೇತಿ ಕೇಂದ್ರ ಪ್ರಗತಿನಗರ, ಅಲೆವೂರು ಇಲ್ಲಿ ನಡೆಯಿತು. ಶಿಬಿರದ ನಾಯಕರಾಗಿ ಸ್ಕೌಟ್ ವಿಭಾಗದಲ್ಲಿ ಶ್ರೀ ಜಿ. ಆನಂದ್ ಅಡಿಗ, ಗೈಡ್ ವಿಭಾಗದಲ್ಲಿ ಶ್ರೀಮತಿ ವನಿತಾ ಎಂ. ರಾವ್ ಇವರು ಸಹಕರಿಸಿದರು. ಜಿಲ್ಲೆಯಿಂದ ಸುಮಾರು 188 ಸ್ಕೌಟ್ಸ್-ಗೈಡ್ಸ್‌ಗಳು

ಭಾಗವಹಿಸಿದ್ದರು. ಸಹನಾಯಕರಾಗಿ ಶ್ರೀ ಕೊಗ್ಗ ಗಾಣಿಗ, ಶ್ರೀ ಶಿವಾನಂದ್, ಶ್ರೀ ಉಮೇಶ್, ಶ್ರೀಮತಿ ಮಲ್ಲಿಕ, ಶ್ರೀಮತಿ ಸೆಲಿನ್, ಶ್ರೀಮತಿ ಅನಿತಾ ಸಹಕರಿಸಿದರು.

* ದಿನಾಂಕ : 16 ರಿಂದ 19 ಏಪ್ರಿಲ್ 2016 ರ ವರೆಗೆ ಭಾರತ್ ಸ್ಕೌಟ್ಸ್-ಗೈಡ್ಸ್ ಜಿಲ್ಲಾ ಸಂಸ್ಥೆ ಉಡುಪಿ ಇದರ ಜಿಲ್ಲಾ ಮಟ್ಟದ ಸ್ಕೌಟ್-ಗೈಡ್ ರಾಜ್ಯಪುರಸ್ಕಾರ ಪೂರ್ವಸಿದ್ಧತಾ ಶಿಬಿರವು ಡಾ. ವಿ.ಎಸ್ ಆಚಾರ್ಯ ಸ್ಕೌಟ್ಸ್-ಗೈಡ್ಸ್ ಜಿಲ್ಲಾ ತರಬೇತಿ ಕೇಂದ್ರ, ಪ್ರಗತಿನಗರ, ಅಲೆವೂರು ಇಲ್ಲಿ ನಡೆಯಿತು. ಜಿಲ್ಲೆಯಿಂದ ಸುಮಾರು 125 ಸ್ಕೌಟ್ಸ್-ಗೈಡ್ಸ್ ವಿದ್ಯಾರ್ಥಿಗಳು ಭಾಗವಹಿಸಿದ್ದರು. ಸಂಪನ್ಮೂಲ ವ್ಯಕ್ತಿಯಾಗಿ ಆಗಮಿಸಿದ ಶ್ರೀ ಪ್ರಭಾ ಕಲ್ಕೂರ್ ಇವರು ವಿದ್ಯಾರ್ಥಿಗಳಿಗೆ ಡಿಸಾಸ್ಟರ್ ಮೇನೇಜ್‌ಮೆಂಟ್ ಪದಕದ ಬಗ್ಗೆ ವಿವರಣೆಯನ್ನು ನೀಡಿದರು.

* ದಿನಾಂಕ : 09-06-2016 ಉಡುಪಿ ಜಿಲ್ಲಾ ಮಟ್ಟದ ಸ್ಕೌಟರ್-ಗೈಡರ್ ಸಮಾವೇಶವು ಉಡುಪಿ ಶ್ರೀಕೃಷ್ಣಮಠದ ರಾಜಾಂಗಣದಲ್ಲಿ ನಡೆಯಿತು. ಸಮವೇಶವು ಭಾರತ್ ಸ್ಕೌಟ್ಸ್-ಗೈಡ್ಸ್ ಕರ್ನಾಟಕ ಇದರ ರಾಜ್ಯ ಉಪಾಧ್ಯಕ್ಷರಾದ ಶ್ರೀಮತಿ ಶಾಂತ ವಿ. ಆಚಾರ್ಯ ಇವರ ಅಧ್ಯಕ್ಷತೆಯಲ್ಲಿ ಜರುಗಿತು. ಪರ್ಯಾಯ ಶ್ರೀ ಪೇಜಾವರ ಮಠದ ಶ್ರೀಶ್ರೀಶ್ರೀ ವಿಶ್ವೇಶತೀರ್ಥ ಶ್ರೀಪಾದರು ಹಾಗೂ ಶ್ರೀಶ್ರೀಶ್ರೀ ವಿಶ್ವಪ್ರಸನ್ನತೀರ್ಥ ಶ್ರೀಪಾದರು ಸಮಾವೇಶದ ಉದ್ಘಾಟನೆಯನ್ನು ನಡೆಸಿದರು. ಪರ್ಯಾಯ ಶ್ರೀ ಪೇಜಾವರ ಶ್ರೀಶ್ರೀಶ್ರೀ ವಿಶ್ವೇಶತೀರ್ಥ ಶ್ರೀಪಾದರು ತಮ್ಮ ಶುಭಸಂದೇಶದಲ್ಲಿ "ಶಿಸ್ತು, ಸೇವೆ, ಸಹಕಾರ ಈ ಅಂಶಗಳು ಜೀವನದ ವೈಯಕ್ತಿಕ, ಸಾಮಾಜಿಕ ಬೆಳವಣಿಗೆಗೆ ಸಹಕಾರಿ, ಈ ಅಂಶಗಳನ್ನು ಬೆಳೆಸುವಲ್ಲಿ ಸ್ಕೌಟಿಂಗ್ ಚಳುವಳಿಯು ಉಪಯುಕ್ತವಾಗುತ್ತದೆ. ಪರ್ಯಾಯ ಸಂದರ್ಭದಲ್ಲಿ ರೋವರ್-ರೇಂಜರ್ಸ್, ಸ್ಕೌಟ್ಸ್-ಗೈಡ್ಸ್‌ಗಳು ಮಾಡಿದ ಸೇವೆ ಸ್ಮರಣೀಯ. ಸ್ಕೌಟಿಂಗ್ ಚಳುವಳಿಯು ಇನ್ನು ಉತ್ತಮ ರೀತಿಯಲ್ಲಿ ಬೆಳೆಯಲಿ ಎಂದು ಹಾರೈಸಿದರು.

ಜಿಲ್ಲಾ ದೈಹಿಕ ಶಿಕ್ಷಣಾಧಿಕಾರಿಗಳಾದ ಶ್ರೀ ಮಧುಕರ್ ಎಸ್. ಇವರು "ಸ್ಕೌಟಿಂಗ್ ಶಿಸ್ತು, ಸಂಯಮ, ಸಮಯಪ್ರಜ್ಞೆ, ಸ್ವಚ್ಛತಾ ಸ್ವಾವಲಂಬನೆ ಚಿಕ್ಕವಯಸ್ಸಿನಲ್ಲಿಯೇ ಮಕ್ಕಳಿಗೆ ಕಲಿಸುವುದರಿಮದ ಮಕ್ಕಳು ಉತ್ತಮ ರೀತಿಯಲ್ಲಿ ಬೆಳೆಯಲು ಸಾಧ್ಯವಾಗುತ್ತದೆ. ಸಮಯದ ಸದುಪಯೋಗವನ್ನು ಸ್ಕೌಟಿಂಗ್‌ನಲ್ಲಿ ಕಲಿಸಲಾಗುತ್ತದೆ ಎಂದು ಹೇಳಿದರು.

ಘನತೆವೆತ್ತ ರಾಷ್ಟ್ರಪತಿಯವರಿಂದ ಸ್ಕೌಟಿಂಗ್‌ನ ಅತ್ಯುನ್ನತ ಪ್ರಶಸ್ತಿ "ಬೆಳ್ಳಿ ಆನೆ" ಪಡೆದ ಶ್ರೀಮತಿ ಶಾಂತ ವಿ. ಆಚಾರ್ಯರನ್ನು, ಹಿರಿಯ ಸ್ಕೌಟರ್ ಗೈಡರ್‌ಗಳನ್ನು ಹಾಗೂ ಪ್ರಥಮಬಾರಿಗೆ ರಾಷ್ಟ್ರಪತಿ ಅವಾರ್ಡ್ ಪಡೆದ ರೋವರ್-ರೇಂಜರ್‌ಗಳನ್ನು ಸ್ವಾಮೀಜಿಯವರು ಸ್ಮರಣಿಕೆ ನೀಡಿ ಆಶೀರ್ವದಿಸಿದರು.

ಸ್ವಾಗತವನ್ನು ಜಿಲ್ಲಾ ತರಬೇತಿ ಆಯುಕ್ತರಾದ ಶ್ರೀ ಕೊಗ್ಗಗಾಣಿಗಾರವರು ನಡೆಸಿಕೊಟ್ಟರು. ಪ್ರಾಸ್ತಾವಿಕ ನುಡಿಯನ್ನು ರಾಜ್ಯದ ಸ್ಥಾನೀಕ ಆಯುಕ್ತರಾದ ಶ್ರೀ ಎನ್. ಶ್ರೀನಿವಾಸನ್ ನುಡಿದರು. ಧನ್ಯವಾದವನ್ನು ಜಿಲ್ಲಾ ಕಾರ್ಯದರ್ಶಿಗಳಾದ ಶ್ರೀ ಕಲ್ಮಾಡಿ ಶೇಖರ್ ಪೂಜಾರಿ ಹಾಗೂ ಕಾರ್ಯಕ್ರಮ ನಿರ್ವಹಣೆಯನ್ನು ಶ್ರೀ ಬಿ. ಆನಂದ ಅಡಿಗ ಅವರು ನಡೆಸಿಕೊಟ್ಟರು. ಜಿಲ್ಲಾ ಸಂಸ್ಥೆಯ ಪದಾಧಿಕಾರಿಗಳು ಭಾಗವಹಿಸಿದ್ದರು.

ಜಿಲ್ಲೆಯಿಂದ ಸುಮಾರು 150 ಸ್ಕೌಟರ್-ಗೈಡರ್‌ಗಳು ಭಾಗವಹಿಸಿದ್ದರು ಜಿಲ್ಲಾ ಸಂಘಟಕರಾದ ಶ್ರೀಮತಿ ಸುಮನ್ ಶೇಖರ್ ಹಾಗೂ ಶ್ರೀ ನಿತಿನ್ ಅಮಿನ್ ಕಾರ್ಯಕ್ರಮವನ್ನು ಸಂಘಟಿಸಿದರು.

* ಭಾರತ್ ಸ್ಕೌಟ್ಸ್ - ಗೈಡ್ಸ್ ಕರ್ನಾಟಕ ಜಿಲ್ಲಾ ಸಂಸ್ಥೆ, ವತಿಯಿಂದ ವಿಶ್ವ ಯೋಗ ದಿನಾಚರಣೆ ಹಾಗೂ ಜಾಥಾ ಕಾರ್ಯಕ್ರಮವನ್ನು ಹಮ್ಮಿಕೊಳ್ಳಲಾಯಿತು. ಉಡುಪಿ ಶ್ರೀ ಕೃಷ್ಣಮಠದಲ್ಲಿ ಖ್ಯಾತ ಉದ್ಯಮಿಯಾದ ಶ್ರೀ ರಾಘವೇಂದ್ರ ಆಚಾರ್ ಇವರು ಯೋಗದ ಬಗ್ಗೆ ಮಾಹಿತಿ ನೀಡಿ, ಸುಲಭ ಯೋಗವನ್ನು ಹೇಳಿಕೊಟ್ಟರು.



ಉಡುಪಿ ಜಿಲ್ಲಾ ದೈಹಿಕ ಶಿಕ್ಷನ ಅಧಿಕಾರಿಯಾದ ಶ್ರೀ ಮಧುಕರ್ ರವರು ವಿಶ್ವ ಯೋಗ ದಿನಾಚರಣೆಯನ್ನು

ಜಾಥಾ ಕಾರ್ಯಕ್ರಮಕ್ಕೆ ಚಾಲನೆ ನೀಡಿದರು. ವಿವಿಧ ಶಾಲೆಗಳಿಂದ ಸುಮಾರು 300 ಸ್ಕೌಟ್ಸ್-ಗೈಡ್ಸ್, ರೋವರ್-ರೇಂಜರ್, ಸ್ಕೌಟ್-ಗೈಡ್ ಶಿಕ್ಷಕರು ಭಾಗವಹಿಸಿದ್ದರು.

ಜಿಲ್ಲಾ ಸಂಘಟಕರಾದ ಶ್ರೀ ನಿತಿನ್ ಅಮೀನ್ ಹಾಗು ಶ್ರೀಮತಿ ಸುಮನ್ ಶೇಖರ್ ಕಾರ್ಯಕ್ರಮವನ್ನು ಸಂಘಟಿಸಿದರು.

## ಬಾಗಲಕೋಟೆ

ದಿನಾಂಕ 21-6-2016 ರಂದು "ಅಂತರಾಷ್ಟ್ರೀಯ ಯೋಗ ದಿನಾಚರಣೆ" ನಿಮಿತ್ತ ಶ್ರೀ ಎಸ್.ಆರ್. ಕಂಠಿ ಕಲಾ, ವಾಣಿಜ್ಯ, ವಿಜ್ಞಾನ ಹಾಗು ಬಿ.ಸಿ.ಎ., ಮಹಾವಿದ್ಯಾಲಯದಲ್ಲಿ ಕಾರ್ಯಕ್ರಮ ಜರುಗಿತು. ಶ್ರೀ ಆನಂದ ಬಂಗಿನವರ ಕಾರ್ಯಕ್ರಮದಲ್ಲಿ ಯೋಗ ದಿನಾಚರಣೆ ಕುರಿತು ಮಾತನಾಡುತ್ತಾ ಯೋಗ ಭಾರತತೀಯತೆಯ ಪ್ರತೀಕ, ಯೋಗ ಎಂದರೆ ಸಾಮಾನ್ಯವಾಗಿ ಕೂಡುವಿಕೆ. ಸಂದಿಸುವಿಕೆ ಎಂಬ ಅರ್ಥವಿದೆ. ಯೋಗದಿಂದ ದೈಹಿಕ, ಮಾನಸಿಕ ಹಾಗೂ ಸದೃಢತೆಯನ್ನು ಒದಗಿಸುವುದು. ಮನುಷ್ಯನ ಮನೋ ದೌರ್ಬಲ್ಯಕ್ಕೆ ಕಾಯಕಲ್ಪ ಒದಗಿಸುವುದು. ಮನಸ್ಸಿನ ಏಕಾಗ್ರತೆಯ ಹತೋಟಿಗೆ ಯೋಗ ದಿವ್ಯ ಔಷಧ. ಯೋಗದಿಮದ ಮನುಷ್ಯ ಸದೃಢವಾಗಿರುವನು ಎಂಬುದಕ್ಕೆ ವೀರಪ್ಪನ್, ಡಾ. ರಾಜಕುಮಾರರವರನ್ನು ಅಪಹರಿಸಿದ ಸಂದರ್ಭದಲ್ಲಿ ಯೋಗದಿಂದ ಮಾನಸಿಕ ಒತ್ತಡ ತಡೆಯಲು ಪ್ರಯತ್ನಿಸಿದ್ದು ಇತಿಹಾಸ ಎಂದು ಉದಾಹರಿಸಿದರು.

ಯೋಗದ ಪ್ರಾತ್ಯಕ್ಷತೆಯನ್ನು ಮಹಾವಿದ್ಯಾಲಯದ ಸಂಖ್ಯಾಶಾಸ್ತ್ರ ಉಪನ್ಯಾಸಕರಾದ ಶ್ರೀಮತಿ ಶಾರದಾ ಬಿರಾದಾರರವರು ರೋವರ್ ವಿದ್ಯಾರ್ಥಿ ಮಲ್ಲಿಕಸಬಾ ಅತ್ತಾರ ಇವರಿಂದ ನೆರವೇರಿಸಿಕೊಟ್ಟರು, ಬೀಳೂರು ಗುರುಬಸವ ತಾಂತ್ರಿಕ ಮಹಾವಿದ್ಯಾಲಯದ ಪ್ರಾಚಾರ್ಯರಾದ ಎಸ್.ಟಿ. ದುಂದುರ ರವರು ಎನ್.ಆರ್. ಹಳ್ಳೂರ ರವರು ಕಾರ್ಯಕ್ರಮದ ಅಧ್ಯಕ್ಷತೆಯನ್ನು ವಹಿಸಿದ್ದರು.

ಕಾರ್ಯಕ್ರಮದಲ್ಲಿ ದೈಹಿಕ ನಿರ್ದೇಶಕರಾದ ಪ್ರೊ. ಎಸ್.ಎಸ್. ಬಿರಾದಾರ, ಪ್ರೊ.ಎಚ್.ಎಂ. ತಳವಾರ ಹಾಗು ಎನ್.ಎಸ್.ಎಸ್. ಅಧಿಕಾರಿಗಳಾದ ಪ್ರೊ. ಎಂ.ಎಚ್. ವಡ್ಡರ, ಭಾರತ್ ಸ್ಕೌಟ್ಸ್-ಗೈಡ್ಸ್‌ನ ರೋವರ್ ಲೀಡರಾದ ಪ್ರೊ. ಎಂ. ಕೆ. ಗವೀಮಠ, ರೇಂಜರ್ ಲೀಡರಾದ ಶ್ರೀಮತಿ ಡಾ.ಎಸ್.ಬಿ. ಮೇಟಿ, ರಾಷ್ಟ್ರೀಯ ಸ್ವಯಂ ಸೇವಕರು ಮಹಾವಿದ್ಯಾಲಯದ ರೋವರ್-ರೆಂಜರ್ ವಿದ್ಯಾರ್ಥಿ-ವಿದ್ಯಾರ್ಥಿನಿಯರು ಮತ್ತು ಮಹಾವಿದ್ಯಾಲಯದ ಶಿಕ್ಷಕ-ಶಿಕ್ಷಕೇತರ ಸಿಬ್ಬಂದಿಯವರು ಯೋಗ ಕಾರ್ಯಕ್ರಮದಲ್ಲಿ ಭಾಗವಹಿಸಿದ್ದರು.



## Experience given by Kum. Meghana S. Belavadi
## State and National President of Youth Committee
### Who attended Seminar at Ghana, South Africa from 30th May to 5th June 2016



(Group Picture along with the CEO of WAGGGS Ms. Anita)

### My Experience at Juliette Low Seminar- 2016

***"We travel, initially, to lose ourselves; and we travel, next, to find ourselves. We travel to open our hearts and eyes and learn more about the world than our newspapers will accommodate."***

**– Pico Iyer**

**Juliette Low Seminar 2016** was one of the best things which has happened to me so far, unsure if I should call it a journey, a moment, or the event, but it is definitely the place where I lost and found myself.

65 young minds, handpicked from around 50 countries spending a week together in a culturally rich country like Ghana- Kusafiri World Centre, discussing about change, transformation, leadership and sustainable development certainly embarked a new wave of energy and evolution. This wonderful initiative by WAGGGS not just equipped me to be a better self but helped me realize how I can play my role in building the community and be an Agent of Change.

Unlike the usual seminars, where we are fed with ready-made answers, at JLS we were made to find our own answers. We were given that platform to think, reflect and learn at our own pace and I should say it was real learning because each one of us learnt from within ourselves.

Friendly, approachable and knowledgeable facilitators made the learning easy and the experience memorable. Innovative games, interactive sessions and personal reflection at the end of each thing added extra value to the experience and learning.

Cross-cultural ambience evoked a sense of unity in diversity- though we gathered from different cultures, traditions, backgrounds we all united as a race of humanity and assured ourselves to "transform our world.

# ವಿಶ್ವಪರಿಸರ ದಿನಾಚರಣೆ ಕಾರ್ಯಕ್ರಮವನ್ನು ಆಚರಿಸಿದ ವಿವಿಧ ಜಿಲ್ಲೆಗಳು



ಶ್ರೀರಂಗಪಟ್ಟಣ ಸ್ಥಳೀಯ ಸಂಸ್ಥೆ, ಮಂಡ್ಯ ಜಿಲ್ಲೆ



ಚಿತ್ರದುರ್ಗ ಜಿಲ್ಲಾಸಂಸ್ಥೆ



ರಾಯಚೂರು ಜಿಲ್ಲಾಸಂಸ್ಥೆ



ಕಲಬುರಗಿ ಜಿಲ್ಲಾಸಂಸ್ಥೆ



ದಾವಣಗೆರೆ ಜಿಲ್ಲಾಸಂಸ್ಥೆ



ದಕ್ಷಿಣ ಕನ್ನಡ ಜಿಲ್ಲಾಸಂಸ್ಥೆ

Regd. as News Paper (Magazine) RNI No : 13348/1959. Postal Regd. No. KA/BGGPO/2580/2015-17
Permitted to Post under WPP System Vide No.: WPP-340
Posted at: Bengaluru PSO, Mysore Road, Bengaluru-26 on 28 & 30 every Month (No. of Pages : 04+24 = 28)







21 ಜೂನ್ 2016ರಂದು ಶಾಂತಿಗೃಹದಲ್ಲಿ ಜರುಗಿದ 2ನೇ ವಿಶ್ವಯೋಗ ದಿನಾಚರಣೆ ಸಮಾರೋಪ ಸಮಾರಂಭದ ಕಾರ್ಯಕ್ರಮದಲ್ಲಿ ಶ್ರೀಮತಿ ಫಿಲೋಮಿನಾ ಲೋಬೋ, ನಿರ್ದೇಶಕರು(ಪ್ರೌಢ ಶಿಕ್ಷಣ) ಮತ್ತು ಶ್ರೀ ಕೆ. ಆನಂದ್, ನಿರ್ದೇಶಕರು (ಪ್ರಾಥಮಿಕ ಶಿಕ್ಷಣ), ಸಾರ್ವಜನಿಕ ಶಿಕ್ಷಣ ಇಲಾಖೆ, ಕರ್ನಾಟಕ ಸರ್ಕಾರ ಇವರುಗಳು ಭಾಗವಹಿಸಿ ಸ್ಕೌಟ್ಸ್-ಗೈಡ್‌ಗಳಿಗೆ ಹಿತವಚನಗಳನ್ನು ನೀಡಿದರು. ಚಿತ್ರದಲ್ಲಿ ರಾಜ್ಯ ಮುಖ್ಯ ಆಯುಕ್ತ ಶ್ರೀ ಪಿ.ಜಿ.ಆರ್. ಸಿಂಧ್ಯ, ರಾಜ್ಯ ಗೈಡ್ ಆಯುಕ್ತೆ ಶ್ರೀಮತಿ ಗೀತಾ ನಟರಾಜ್, ದಕ್ಷಿಣ ಪ್ರಾಂತೀಯ ಕಛೇರಿಯ ಸಹನಿರ್ದೇಶಕ ಶ್ರೀ ಅರಣ್ ಪತ್ತಾರ್, ರಾಜ್ಯ ಕಾರ್ಯದರ್ಶಿ ಶ್ರೀ ಸಿ.ಎಸ್. ರೆಡ್ಡಿ, ಹಾಗೂ ಶ್ರೀಮತಿ ಬಿ.ವಿ. ರಾಮಲತ ಅವರುಗಳನ್ನು ಕಾಣಬಹುದು.









20 ರಿಂದ 22 ಜೂನ್ 2016ರವರೆಗೆ ಶಾಂತಿಗೃಹದಲ್ಲಿ ಜರುಗಿದ 2ನೇ ವಿಶ್ವಯೋಗ ದಿನಾಚರಣೆಯ ಅಂಗವಾಗಿ ಯೋಗ ತರಬೇತಿಯಲ್ಲಿ ತೊಡಗಿರುವ ಸ್ಕೌಟ್ಸ್-ಗೈಡ್ಸ್ ಹಾಗೂ ರೋವರ್ಸ್-ರೇಂಜರ್ಸ್‌ಗಳು



If not delivered, please return to :
**THE EDITOR, Karnataka Scout & Guide**
State Headquarters, Shanthi Gruha
#39, Palace Road, Bengaluru - 560 001
Ph.: 080-22260017
e-mail.: shq@bsgkarnataka.org
editor@bsgkarnataka.org
www.bsgkarnataka.org

Sri.M.Suresh.
Asst Teacher
Thuppadahalli ~~577532~~
Holalkere Tq Chitradurga Dist

**Published by : The Bharat Scouts & Guides, Karnataka, State Headquarters**
**Shanthi Gruha,** #39, Palace Road, Bengaluru - 560 001. **Publisher & Editor : Siddaiah,** IAS (Retd.)
**nted by : L. Lingappa, M.D. at Sathyasri Printers Pvt. Ltd.,** 16/1, 3rd Cross, 2nd Main, Kasturiba Nagar, Mysore Road, Bengaluru-26